# ಅಸಮಾನತೆಯ ಆಸುರೀ ಮುಖಗಳು

## ೧-ಅಸ್ಪೃಶ್ಯತೆ



ಸಮುದಾಯ ಪ್ರಕಟಣೆ
ಬೆಂಗಳೂರು

# ಪರಿವಿಡಿ



---


**ಬೆಲೆ : ರೂ. 5**

ಮುಖಚಿತ್ರ : ಮೋನಪ್ಪ

ಪ್ರಕಟಣೆ
**ಸಮುದಾಯ ಸಮನ್ವಯ ಸಮಿತಿ**
ನಂ. 162, 6ನೇ ಮುಖ್ಯರಸ್ತೆ
4ನೇ ಫೇಸ್, 7ನೇ ಬ್ಲಾಕ್
ಬನಶಂಕರಿ ಮೂರನೇ ಹಂತ
ಬೆಂಗಳೂರು - 560 085

ಮುದ್ರಣ
**ನವಕರ್ನಾಟಕ ಪ್ರಿಂಟರ್ಸ್**
ನಂ. 167-168, 10ನೇ ಮೇನ್
3ನೇ ಫೇಸ್, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - 560 058

---

ಮುದ್ರಣ ಸೌಜನ್ಯ : ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್, ಬೆಂಗಳೂರು - 560 001

# ಸಂಪಾದಕರ ನುಡಿ

ಸಮುದಾಯ ಎಂದರೇನೆ ಒಟ್ಟಿಗೆ ಬಾಳುವ ತಂಡ. ನಮ್ಮ ಸಮಾಜವಿಡೀ ಒಟ್ಟಿಗೆ ಬಾಳುವ ಆಶಯ ನಮ್ಮದು. ಒಟ್ಟಿಗೆ ಬದುಕುವುದು ಅನಿವಾರ್ಯ. ಬದುಕನ್ನು ಹಸನುಗೊಳಿಸಿ ಬಾಳುವುದು ಸಾಧ್ಯ. ಈ ಹಸನುಗೊಳಿಸುವ ಪ್ರಯತ್ನ ಸಮಾಜದಲ್ಲಿನ ಚಲನೆಗೆ ಕಾರಣ ವಾಗಿದೆ. ಆದರೆ ಎಷ್ಟೋ ಪ್ರಯತ್ನಗಳು ಕೆಲವರ ಬದುಕನ್ನು ಮಾತ್ರ ಶ್ರೀಮಂತಗೊಳಿಸಿದೆ. ಇದು ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ ಮುಂತಾದ ಎಲ್ಲ ಸಂಸ್ಥೆಗಳಲ್ಲಿ ತಾರತಮ್ಯ ಸಹಜವೆನ್ನಿಸುವಷ್ಟು ಹಾಸು ಹೊಕ್ಕಾಗಿ ಬೆಳೆದಿದೆ. ಜಾಗತಿಕ ವರ್ಗ ಅಸಮಾನತೆ ಮತ್ತು ದೇಶೀಯ ವರ್ಣವೈಷಮ್ಯ ಆಧುನಿಕ ಭಾರತದ ರೋಗ, ಇವು ಒಗ್ಗೂಡಿ ಹೊಸ ಚಿಗುರು ಹಳೆ ಬೇರುಗಳ ವಿಷವೃಕ್ಷವಾಗಿ ನಿಂತಿದೆ. ಇದರ ನೆರಳಿನ ನಂಜು, ಜಾಗತೀಕರಣ, ಮುಕ್ತ ಮಾರುಕಟ್ಟೆಗಳ ಝುಳ ಇವುಗಳ ನಡುವೆ ಸಮಾಜದ ಕೆಳ ತುದಿಯವರಿಗೆ ಬೇರೆ ಆಯ್ಕೆಗಳಿವೆಯೆ ? ಇದು ಎಲ್ಲರನ್ನೂ ಕಾಡುತ್ತಿರುವ ಪ್ರಶ್ನೆ.

ತುರ್ತು ಪರಿಸ್ಥಿತಿಯ ಕರಾಳ ಕಾಲದಲ್ಲಿ ಪ್ರತಿಭಟನೆಯ ಸಾಂಸ್ಕೃತಿಕ ಮಾಧ್ಯಮವಾಗಿ ಮೈತಳೆದ ಸಮುದಾಯ ಮೂವತ್ತರ ಹರೆಯದಲ್ಲಿದೆ. ಏಳು–ಬೀಳುಗಳ ನಡುವೆ ಆತ್ಮಾವ ಲೋಕನ ಒಂದೆಡೆಗೂ ಹೊಸ ಸವಾಲುಗಳನ್ನು ಎದುರಿಸುವ ಹುಮ್ಮಸ್ಸು ಒಂದೆಡೆಗೂ ಇದೆ. ಸಮುದಾಯ ಸಾಂಸ್ಕೃತಿಕ ಸಂಘಟನೆ. ಅದು ಎಂದಿಗೂ ಸಂಸ್ಕೃತಿಯನ್ನು ಬರಿದೆ ಭಾವನೆಗಳ ಉದ್ರಿಕ್ತ ಅಭಿವ್ಯಕ್ತಿ ಎಂದು ಪರಿಗಣಿಸಿಲ್ಲ. ಹಾಗೆಯೇ ಸೈದ್ಧಾಂತಿಕತೆ ನಿಂತ ನೀರು ಆಗುವುದಿಲ್ಲ. ಹಾಡು, ನಾಟಕ, ಚಿತ್ರ ಮುಂತಾದವೂ ವಿಚಾರಗೋಷ್ಠಿ, ಚರ್ಚೆ, ವಿಚಾರಸಾಹಿತ್ಯವು ಜತೆ ಜತೆಯಾಗಿ ಕರ್ನಾಟಕದ ಉದ್ದಗಲಕ್ಕೂ ಸಮುದಾಯದ ಮುಖೇನ ಅನುರಣಿಸಿವೆ. ವೈಚಾರಿಕತೆ ಆಧರಿಸಿದ ರಾಜ್ಯವ್ಯಾಪೀ ಸಂಘಟನೆ ಸಮುದಾಯ. ಮೂವತ್ತನೇ ವರ್ಷದ ವರ್ಧಂತಿಯನ್ನು ನಿರ್ದಿಷ್ಟ ವಿಷಯದ ಸುತ್ತಾ ಹಮ್ಮಿಕೊಳ್ಳುವ ಹಂಬಲದಿಂದ ಕಾರ್ಯಕ್ರಮ ರೂಪಿಸಿಕೊಂಡಿತು. ಈ ಸಲದ ಕೇಂದ್ರ ವಿಷಯ ಅಸಮಾನತೆ.

ಸಮಾನತೆ ಎನ್ನುವುದು ಬರಿದೆ ಲೆಕ್ಕಾಚಾರದ ವಿಷಯವಲ್ಲ. ಸಮಾನತೆ ವೈವಿಧ್ಯಕ್ಕೆ ಮಾರಕವಲ್ಲ. ಸಮಾನತೆ ಸಮವಸ್ತ್ರದ ಕವಾಯಿತಲ್ಲ. ಸಹಜವಾಗಿ ಅರಳುವ ವೈವಿಧ್ಯತೆಗೆ ಸಮಾನವಾದ ಗೌರವ, ಮರ್ಯಾದೆ ದಕ್ಕಬೇಕು. ಅದಿಲ್ಲದಿದ್ದರೆ ಒಂದು ಇನ್ನೊಂದನ್ನು ನುಂಗುತ್ತಾ ವೈವಿಧ್ಯತೆ ನಷ್ಟವಾಗುತ್ತದೆ. ಆದ್ದರಿಂದ ನಿಸರ್ಗ ನಮಗೆ ಕಲಿಸುವುದು '*ಸಮತೋಲವೇ ಸಮಾನತೆ*" ಎಂದು. ನಿಸರ್ಗದಂತೆ ಸಮಾಜದಲ್ಲೂ ಸಮತೋಲ ಕಾಪಾಡಿಕೊಳ್ಳಬೇಕು. ಸಮಾನತೆಯ ಮೂಲ ಸಮಭಾವ. ಇದು ಏಕಕಾಲಕ್ಕೆ ಭಾವುಕ ಮತ್ತು ವೈಚಾರಿಕ ಆಯಾಮಗಳನ್ನು ಪಡೆದುಕೊಂಡಿದೆ. ಆದ್ದರಿಂದಲೇ ಇದು ಸಾಂಸ್ಕೃತಿಕ ಸಂಘಟನೆಗೆ ಪ್ರಮುಖ ವಿಷಯವಾಗಿದೆ.

ಸಮಾನತೆ ಸಾಧಿಸಲು 'ಮೀಸಲಾತಿ'ಯನ್ನು ಸುಲಭದ ಸಾಧನವೆಂದು ಭಾವಿಸಲಾಗುತ್ತಿದೆ. ದಲಿತ (ಎಸ್.ಸಿ/ಎಸ್.ಟಿ), ಹಿಂದುಳಿದ ಜಾತಿಗೆ ಮೀಸಲಾತಿ, ಮಹಿಳೆಯರಿಗೆ ಮೀಸಲಾತಿ, ಪ್ರಾದೇಶಿಕ ಮೀಸಲಾತಿ, ಗ್ರಾಮೀಣ ಕೃಪಾಂಕ, ಧಾರ್ಮಿಕ ಮತ್ತು ಭಾಷಿಕ ಅಲ್ಪಸಂಖ್ಯಾತರಿಗೆ ಮೀಸಲಾತಿ, ಅಂಗವಿಕಲರಿಗೆ ಮೀಸಲಾತಿ ಮತ್ತು ಇದರೊಳಗೆ ಒಳಮೀಸಲಾತಿ. ಇಷ್ಟೆಲ್ಲ ಇರುವುದು, ಸರಕಾರೀ ಉದ್ದಿಮೆಗಳಿಗೆ ಸಂಬಂಧಪಟ್ಟಂತೆ ಮತ್ತು ಅದಕ್ಕೊಯ್ಯುವ ಶಿಕ್ಷಣದಲ್ಲಿ

ಅದೂ ಸರಕಾರೀ/ಅನುದಾನಿತ ಸಂಸ್ಥೆಗಳಲ್ಲಿ. ಒಟ್ಟು ಉದ್ಯೋಗಗಳಲ್ಲಿ ಸರಕಾರೀ ಉದ್ಯೋಗಗಳೆಷ್ಟು? ಒಟ್ಟು ಉನ್ನತ ಶಿಕ್ಷಣದಲ್ಲಿ ಸರಕಾರೀ/ಅನುದಾನಿತ ಸಂಸ್ಥೆಗಳ ಪಾತ್ರವೆಷ್ಟು? ಇರುವ ಕೊಂಚವೇ ಅನ್ನಕ್ಕೆ ಅಸಮಾನ ಸ್ಪರ್ಧೆಯೇ? ಕೊಂಚ ಒಳಹೊಕ್ಕು ನೋಡಿದರೆ ಭಿನ್ನ ಚಿತ್ರವಿದೆ. ಅತ್ಯುನ್ನತ ಅನುದಾನಿತ ಶಿಕ್ಷಣ ಸಂಸ್ಥೆಗಳಾದ ಐ.ಐ.ಟಿ. ಮುಂತಾದವನ್ನು ನೋಡಿದರೆ ದೇಶ ಅವರಿಗೆ ಖರ್ಚು ಮಾಡುತ್ತಿರುವುದಕ್ಕೂ, ಅವರಿಂದ ದೇಶಕ್ಕೆ ಉಪಯೋಗವಾಗುತ್ತಿರುವುದಕ್ಕೂ, ಅಲ್ಲಿ ಓದಿದ ಮೇಲೆ ಆ ವಿದ್ಯಾರ್ಥಿಗಳ ಹಣ ಗಳಿಕೆಗೂ ಅರ್ಥಾರ್ಥ ಸಂಬಂಧವಿದೆಯೆ? ಆದರೆ ಈ ಮೂಲೆಗಳಲ್ಲಿ ಮೀಸಲಾತಿಗೆ ತೀವ್ರ ವಿರೋಧ ಕಾಣುತ್ತಿದ್ದೇವಲ್ಲ ಇದರ ಆರ್ಥಿಕ-ರಾಜಕಾರಣವೇನು? ಇದನ್ನು ಪರಿಣತರಷ್ಟೇ ಪರಿಗಣಿಸಿದರೆ ಸಾಲದು. ಈ ಎಲ್ಲ ವಿರೋಧದ ಹಿಂದಿನ ವಾದವಾದ *'ಪ್ರತಿಭೆ'* ಎಂದರೆ ಏನು? ಬಿ-ಶಾಲೆಯಿಂದ ಬಂದವರು ಕೃಷಿ ವಹಿವಾಟಿನಲ್ಲಿ ಕೈ ಹಾಕುವುದಕ್ಕೂ ರೈತರ ಆತ್ಮಹತ್ಯೆಗೂ ಸಂಬಂಧವಿಲ್ಲವೇ? ಪರ/ವಿರೋಧೀ ಪ್ರತಿಭಟನೆಗಳಲ್ಲಿರುವ ಯುವಕರಿಗೆ ಇದರ ಯೋಚನೆ ಸರಿಯಾಗಿ ಬಂದಿದೆಯೆ? ಒಂದು ದೂರದರ್ಶನ ಕಾರ್ಯಕ್ರಮದಲ್ಲಿ ಜಾತಿ ಮೀಸಲಾತಿ ವಿರೋಧಿಸಿದ ವಿದ್ಯಾರ್ಥಿನಿ ಮಹಿಳೆಯರಿಗೆ ಮೀಸಲಾತಿಯನ್ನು ಸಮರ್ಥಿಸಿಕೊಳ್ಳುತ್ತಿದ್ದ ಚಿತ್ರ ನಮ್ಮ ಗೊಂದಲಗಳ ಪ್ರತಿಮೆಯಂತಿತ್ತು.

ಅಸಮಾನತೆ ಬಹುಮುಖಿ. 'ಕತ್ತಲೆಗೆ ಹತ್ತೆ ತಲೆ?' ಅದು ನೂರಾರು. ಅಷ್ಟೇ ಅಲ್ಲ ಅದು ಮಾಯಾರೂಪೀ. ರಾವಣನಂತೆ. ಅದು ಒಮ್ಮೆ ಬ್ರಾಹ್ಮಣನಾಗಿ, ಒಮ್ಮೆ ಕಾದಾಡುವ ಶೂರನಾಗಿ, ಒಮ್ಮೆ ಸನ್ಯಾಸಿಯಾಗಿ, ಕಾಮಿಯಾಗಿ, ಕ್ರೂರನಾಗಿ, ಆರ್ಯ-ವಿರೋಧಿಯಾಗಿ, ಸಂಪತ್ತನ್ನು ಕ್ರೋಢೀಕರಿಸಿದ, ಸ್ವರ್ಣಮಯೀ ಲಂಕೆ ಕಟ್ಟಿದವನಾಗಿ, ಕಾಣಿಸಿಕೊಳ್ಳುವುದು. ಅದಕ್ಕಾಗಿ *'ಅಸಮಾನತೆಯ ಆಸುರೀ ಮುಖಗಳ'*ನ್ನು ಕೇಂದ್ರ ವಿಷಯವಾಗಿಸಿ ಕಾರ್ಯಕ್ರಮ ನಡೆಸಲು ಹೊರಟಾಗ ಸಾಮಾಜಿಕ ಅಸಮಾನತೆಯ ವಿವಿಧ ಮಗ್ಗುಲುಗಳಾಗಿ ಶೈಕ್ಷಣಿಕ, ಆರ್ಥಿಕ, ಲೈಂಗಿಕ, ಸಾಂಸ್ಕೃತಿಕ, ಪ್ರಾದೇಶಿಕ, ರಾಜಕೀಯ, ಔದ್ಯೋಗಿಕ, ಭಾಷಿಕ, ವೈಚಾರಿಕ ಮುಂತಾದ ಹಲವಾರು ಸಂಗತಿಗಳು ನಮ್ಮೆದುರು ನಿಲ್ಲುತ್ತವೆ. ಆದರೆ ಇವೆಲ್ಲದರ ಕಾರಣವೂ ಫಲಿತವೂ ಆದ ಸಾಮಾಜಿಕ ಅಸಮಾನತೆಯಲ್ಲಿಯೂ ಅಸ್ಪೃಶ್ಯತೆ ಕುರಿತ ಚರ್ಚೆ ನಿರ್ದಿಷ್ಟವಾಗಿ ಗಮನ ಕೇಂದ್ರೀಕರಿಸಲು ಮುಖ್ಯವೆಂದು ತೋರಿತು. ಒಂದು ರೀತಿಯಲ್ಲಿ ಇದು ಪ್ರಧಾನವಾದ ಬೆತ್ತಲೆ ಮುಖ. ಉಳಿದ ಮುಖಗಳಿಗೆ ಮುಖವಾಡಗಳುಂಟು. ಕಾಲ, ಅವಕಾಶಗಳಾದರೆ ಉಳಿದ ಮುಖಗಳನ್ನೂ ಚರ್ಚಿಸಬೇಕು.

ಇದಕ್ಕೆ ನಮ್ಮ ಕಾರ್ಯಕ್ರಮ ಹೀಗೆ :

**ಮೊದಲಹಂತ** : ಸಮಾನಮನಸ್ಕ ಸಾಂಸ್ಕೃತಿಕ ಪ್ರತಿನಿಧಿಗಳು ಹಾಗೂ ಸಮುದಾಯ ಸಂಘಟನೆಯ 18 ಘಟಕಗಳ ಪ್ರತಿನಿಧಿಗಳ 2 ದಿನಗಳ ಕಾರ್ಯಾಗಾರ. ಈ ಕಾರ್ಯಾಗಾರದಲ್ಲಿ ಅಸ್ಪೃಶ್ಯತೆ ಹಾಗೂ ಅಸಮಾನತೆ ಮುಂತಾದ ಸಾಮಾಜಿಕ ಪಿಡುಗುಗಳ ಬಗ್ಗೆ ತಲಸ್ಪರ್ಶೀ ಅಧ್ಯಯನ, ಸಮಸ್ಯೆಯ ಎಲ್ಲ ಮಗ್ಗಲುಗಳನ್ನು ಅರಿಯುವ ಸಾಮೂಹಿಕ ಪ್ರಯತ್ನ.

ಈ ಅಧ್ಯಯನ ಶಿಬಿರ ಕಳೆದ ಜುಲೈ 16 ಮತ್ತು 17ರಂದು ಯಶಸ್ವಿಯಾಗಿ ಮೈಸೂರಿನಲ್ಲಿ ನಡೆದಿದ್ದು ಈ ಶಿಬಿರದ ಉದ್ಘಾಟನೆಯನ್ನು ಖ್ಯಾತ ವಿಮರ್ಶಕ ಶ್ರೀ ಜಿ. ಹೆಚ್. ನಾಯಕ್ ಮಾಡಿದರು. ಸಮಾರೋಪ ಸಂವಾದ ಕಾರ್ಯಕ್ರಮದಲ್ಲಿ ಖ್ಯಾತ ಸಾಹಿತಿ ದೇವನೂರು ಮಹಾದೇವ ಭಾಗವಹಿಸಿದ್ದರು. ಶಿಬಿರಾರ್ಥಿಗಳ ಜೊತೆಗೆ ಸಮಸ್ಯೆಯ ಎಲ್ಲಾ ಮುಖಗಳನ್ನು ಪರಿಚಯಿಸಲು ಶ್ರೀ ಗೋವಿಂದಯ್ಯ, ಶ್ರೀ ಅರವಿಂದ ಮಾಲಗತ್ತಿ, ಡಾ॥ ಮುಜಾಫರ್ ಅಸಾದಿ, ಶ್ರೀ ಓ. ಎಲ್. ನಾಗಭೂಷಣಸ್ವಾಮಿ, ಶ್ರೀ ಜನಾರ್ಧನ್, ಪ್ರೊ॥ ಆರ್.ಕೆ. ಹುಡಗಿ, ಎಸ್.ವೈ.

ಗುರುಶಾಂತ್ ಮುಂತಾದವರು ಭಾಗವಹಿಸಿದ್ದರು. ಶ್ರೀ ಲಿಂಗದೇವರು ಹಳೆಮನೆ ಅವರು ಶಿಬಿರದ ನಿರ್ದೇಶನದ ಜವಾಬ್ದಾರಿ ಹೊತ್ತಿದ್ದರು.

**ಎರಡನೇ ಹಂತ :** ಸೆಪ್ಟೆಂಬರ್ 23ರಿಂದ 27ರವರೆಗೆ ಬೆಂಗಳೂರು, ಗುಲ್ಬರ್ಗಾ, ಧಾರವಾಡ ಮತ್ತು ಮೈಸೂರು ವಲಯಗಳಲ್ಲಿ ಮೇಲಿನ ಶಿಬಿರದ ಅಂಶಗಳನ್ನು ಆಧರಿಸಿದ ಹಾಡುಗಳು, ಕಿರುನಾಟಕಗಳ ಸಿದ್ಧತಾ ಶಿಬಿರವನ್ನು ಏರ್ಪಡಿಸಲಾಯಿತು. ಒಟ್ಟು 18 ತಂಡಗಳ 200ಕ್ಕೂ ಹೆಚ್ಚು ಕಲಾವಿದರು ವಿಷಯಗಳ ಸಂವಹನ ತರಬೇತಿ ಶಿಬಿರದಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಈ ಐದು ದಿನಗಳ ಕಾರ್ಯಗಾರದಲ್ಲಿ ಶ್ರೀ ಸಿ. ಬಸವಲಿಂಗಯ್ಯ, ಶ್ರೀ ಜನಾರ್ದನ, ಶ್ರೀ ಪಿಚ್ಚಳ್ಳಿ ಶ್ರೀನಿವಾಸ್, ಶ್ರೀ ಕೆ. ರಾಮಯ್ಯ ಮುಂತಾದವರು ಸಂಪನ್ಮೂಲ ವ್ಯಕ್ತಿಗಳಾಗಿ ಪಾಲ್ಗೊಳ್ಳುತ್ತಿದ್ದಾರೆ.

**ಮೂರನೇ ಹಂತ :** ಅಕ್ಟೋಬರ್ 2 ಗಾಂಧಿ ಜಯಂತಿಯಂದು ಪ್ರಾರಂಭಗೊಂಡು ದಿನಕ್ಕೆ 2 ಕಾಲೇಜುಗಳಂತೆ 15 ದಿನಗಳ ಕಾಲ ಸಮುದಾಯದ ಕಲಾತಂಡಗಳು ತರಬೇತಿ ಶಿಬಿರದಲ್ಲಿ ಸಿದ್ಧಪಡಿಸಿದ ಕಿರುನಾಟಕ, ಹಾಡುಗಳು, ಸಂವಾದ ಕಾರ್ಯಕ್ರಮಗಳನ್ನು ನೀಡುವುದು.

18 ಘಟಕಗಳು ಈ ಉದ್ದೇಶಕ್ಕಾಗಿ ಕಲಾ ತಂಡಗಳನ್ನು ಸಿದ್ಧಪಡಿಸಿ 15 ದಿನಗಳ ಅವಧಿಯಲ್ಲಿ ರಾಜ್ಯಾದ್ಯಂತ 540 ಕಾಲೇಜುಗಳನ್ನು ಈ ಉದ್ದೇಶಕ್ಕಾಗಿ ಭೇಟಿ ಮಾಡುವುದು. ಮೊದಲಲ್ಲಿ ಪದವಿ ಕಾಲೇಜುಗಳನ್ನು ನಾವು ಸಂಪರ್ಕಿಸಲಿದ್ದು, ಕಾಲೇಜಿನ ಯುವ ಪೀಳಿಗೆಗೆ ಈ ಕಾರ್ಯಕ್ರಮವನ್ನು ನೀಡಲಿದ್ದೇವೆ.

ಮೂರನೆಯ ಹಂತದಲ್ಲಿ ವಿದ್ಯಾರ್ಥಿಗಳನ್ನು ಸಂಪರ್ಕಿಸುವಾಗ ಅಸಮಾನತೆಯ ಆಸುರೀ ಮುಖಗಳನ್ನು ಪರಿಚಯಿಸುವ ಏಳೆಂಟು ಹೊತ್ತಿಗೆಗಳನ್ನು ತರುವ ಹಂಬಲವಿತ್ತು. ಕಾಲಾವಕಾಶವಾಗದೆ, ಮೊದಲಿಗೆ ನಡೆಸಿದ ಅಧ್ಯಯನ ಶಿಬಿರದ ಮಾತುಗಳನ್ನಾಧರಿಸಿ ಅಸ್ಪೃಶ್ಯತೆ ಎಂಬ ಆಸುರೀ ಮುಖದ ಮತ್ತು ಅದನ್ನೆದರಿಸುವ/ಎದುರಿಸುತ್ತಿರುವ ಹಲವು ಮಜಲುಗಳನ್ನು ಇಲ್ಲಿ ಸಂಗ್ರಹಿಸಿದೆ. ಎಲ್ಲ ಮಾತುಗಳೂ ಉಪಲಬ್ಧವಲ್ಲದ್ದರಿಂದ ಉಪಲಬ್ಧವಾದ ಮಾತು ಮತ್ತು ಚರ್ಚೆಗಳನ್ನು ಆಯ್ದು ಕೊಟ್ಟಿದೆ. ಇಲ್ಲಿರುವ ಮಾತುಗಾರರು ಅತ್ಯಂತ ಪ್ರಬುದ್ಧರೂ, ವಿಚಾರಶೀಲರೂ ಆದವರು. ವಿಷಯ ಜ್ವಲಂತವಾದದ್ದು. ಗುರಿ ಇಟ್ಟ ಓದುಗರು ಭವಿಷ್ಯ ರೂಪಿಸುವ ತರುಣ ವಿದ್ಯಾರ್ಥಿಗಳು. ಈ ಸಂಬಂಧ ಗಟ್ಟಿಪಡಿಸುವುದಕ್ಕಿಂತ ಹಿರಿದಾದ ಸಾಂಸ್ಕೃತಿಕತೆ ಉಂಟೆ ?

ಭಾಷಣ ಮಾಡಿದ, ಭಾಗವಹಿಸಿದ ಎಲ್ಲ ವಿಚಾರಶೀಲರಿಗೆ ನಮ್ಮ ನಮನ. ಸಮುದಾಯದ ಗೆಳೆಯರಿಗೆ ಅಭಿನಂದನೆ. ಟೇಪಿನಿಂದ ಕೇಳಿ ಬರಹಕ್ಕೆ ತಂದು ಡಿ.ಟಿ.ಪಿ. ಮಾಡಿಸಿದ ವಿದ್ಯಾರ್ಥಿ ಮಿತ್ರರಾದ ಡಾ॥ ಗೋವಿಂದಸ್ವಾಮಿ, ಶ್ರೀ ಅದ್ವೈತ ಮತ್ತು ಶ್ರೀ ಸಂದೀಪ ಅವರಿಗೆ, ಇಳಾ ಮುದ್ರಣದ ಗುರುಗೆ, ಪ್ರೀತಿಯ ಕೃತಜ್ಞತೆಗಳು. ಮುದ್ರಣದ ಜವಾಬ್ದಾರಿಯನ್ನು ಒಪ್ಪಿಕೊಂಡು ಅಂದವಾಗಿ, ಉಚಿತವಾಗಿ ಮುದ್ರಿಸಿಕೊಟ್ಟಿರುವ ನವಕರ್ನಾಟಕದವರಿಗೆ ವಿಶೇಷವಾಗಿ ಶ್ರೀ ಆರ್. ಎಸ್. ರಾಜಾರಾಮ್ ಅವರಿಗೆ, ಮುಖಚಿತ್ರ ರಚಿಸಿಕೊಟ್ಟ ಶ್ರೀ ಮೋನಪ್ಪ ಅವರಿಗೆ, ಸಮುದಾಯ ಆಭಾರಿಯಾಗಿದೆ.

**ಜೆ. ಶ್ರೀನಿವಾಸ ಮೂರ್ತಿ**
ಸಂಪಾದಕ

# ಆಶಯ

ಇತ್ತೀಚೆಗೆ ಧಾರವಾಡದಲ್ಲಿ April 14, 15 ಕರ್ನಾಟಕ ರಾಜ್ಯ ಸಮುದಾಯದ ಸಮ್ಮೇಳನ ನಡೆದಿದೆ. ಆ ಸಮ್ಮೇಳನದಲ್ಲಿ ಕರ್ನಾಟಕದ ಸುಮಾರು 17 ಘಟಕಗಳು ಭಾಗವಹಿಸಿ, ಸಮುದಾಯವನ್ನು ಮುಂಕೊಂಡೊಯ್ಯುವುದು ಹೇಗೆ, ಯಾವ ಯಾವ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕೆಂಬ ತೀರ್ಮಾನವನ್ನು ಮಾಡಿ, ಬಹುಮುಖ್ಯವಾಗಿ ಎರಡು ತೀರ್ಮಾನವನ್ನು ಈ ವರ್ಷಕ್ಕೆ ಸಂಬಂಧಪಟ್ಟಂತೆ ಮಾಡಿವೆ. ಅದರಲ್ಲಿ ಮೊದಲನೆಯದು ಇತ್ತೀಚೆಗೆ ಕರ್ನಾಟಕಕ್ಕೆ ಸಂಬಂಧಪಟ್ಟ ಹಾಗೆ ಅಸ್ಪೃಶ್ಯತೆ ಮತ್ತು ಅಸಮಾನತೆ ಕುರಿತು ಮಾಧ್ಯಮಗಳು ಹೆಚ್ಚು ವರದಿ ಮಾಡಿವೆ. ಹಾಗಾಗಿ ಸಮ್ಮೇಳನದಲ್ಲಿ ತೆಗೆದುಕೊಂಡ ತೀರ್ಮಾನವೆಂದರೆ, ಅಸ್ಪೃಶ್ಯತೆಗೆ ಸಂಬಂಧಪಟ್ಟ ಹಾಗೆ ಒಂದು ವ್ಯಾಪಕವಾದ ಚಳುವಳಿ ಅಥವಾ ಆಂದೋಲನವನ್ನು ಮಾಡಬೇಕು ಎಂದು. ಇನ್ನು ಎರಡನೆಯ ತೀರ್ಮಾನ ಇಂತಿದೆ. ಈ ವರ್ಷ ಭಗತ್‌ಸಿಂಗ್ ಮತ್ತು ಗೆಳೆಯರೆಲ್ಲರೂ ದೇಶಕ್ಕಾಗಿ ಹೋರಾಡಿ, ಪ್ರಾಣವನ್ನು ತ್ಯಜಿಸಿ 75 ವರ್ಷಗಳು ತುಂಬಿವೆ. ಆದ್ದರಿಂದ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಅವರನ್ನು ನೆನೆಯಲು, ಅವರ ಮೌಲ್ಯಗಳನ್ನೂ ನಾವು ಪರಿಪಾಲಿಸಲು ಪ್ರಸಕ್ತ ವರ್ಷವನ್ನು 'ಭಗತ್‌ಸಿಂಗ್ ವರ್ಷ' ಎಂದು ಕರೆಯಲಾಗಿದೆ. ಮಾತ್ರವಲ್ಲದೆ ರಾಜ್ಯಮಟ್ಟದ ಯುವಜನ ಶಿಬಿರಗಳನ್ನು ಆಯೋಜಿಸಲು ತೀರ್ಮಾನಿಸಲಾಗಿದೆ. ಈ ನಿಟ್ಟಿನಲ್ಲಿ ಅಸ್ಪೃಶ್ಯತೆಯ ವಿರುದ್ಧದ ಮೊದಲ ಕಾರ್ಯಕ್ರಮವನ್ನು ಮೈಸೂರಿನಲ್ಲಿ ಹಮ್ಮಿಕೊಳ್ಳಲಾಯಿತು. ಆದ್ದರಿಂದ ಈ ಕಾರ್ಯಕ್ರಮಕ್ಕೆ ಉತ್ತರದ ಗುಲ್ಬರ್ಗದಿಂದ ದಕ್ಷಿಣದ ಕೋಲಾರದವರೆಗೆ ಅಂತೆಯೇ ಪಶ್ಚಿಮದ ಮಂಗಳೂರಿನಿಂದ ಪೂರ್ವದ ಬಳ್ಳಾರಿಯವರೆಗೆ ಪ್ರಾತಿನಿಧಿಕವಾಗಿ ಶಿಬಿರಾರ್ಥಿಗಳು ಬಂದಿದ್ದರು. ವಿಷಯದ ಬಗ್ಗೆ ದೀರ್ಘವಾಗಿ ಅರಿತವರನ್ನು ಕಾರ್ಯಕ್ರಮಕ್ಕೆ ಆಹ್ವಾನಿಸಲಾಗಿತ್ತು. ಇದರಿಂದ ಶಿಬಿರಾರ್ಥಿಗಳು ಅವರೊಂದಿಗೆ ಆರೋಗ್ಯಕರವಾದ ಸಂವಾದವನ್ನು ನಡೆಸಿದರು. ಅಕ್ಟೋಬರ್ 2ರಿಂದ ಅಕ್ಟೋಬರ್ 17ರವರೆಗೆ ಪ್ರತಿ ಜಿಲ್ಲೆಯಲ್ಲೂ ದಿನಕ್ಕೆ ಎರಡು ಕಾಲೇಜಿನಂತೆ, ವಿದ್ಯಾರ್ಥಿಗಳೊಂದಿಗೆ ವಿಷಯದ ಬಗ್ಗೆ ಸಂವಾದ ನಡೆಸುವ ಮಹತ್ತರ ಯೋಜನೆ. ಆದ್ದರಿಂದ ಜಾಗತೀಕರಣ ನಡೆಯುತ್ತಿರುವ ಈ ಕಾಲದಲ್ಲಿ ಕಾಲೇಜಿನ ವಿದ್ಯಾರ್ಥಿಗಳೊಂದಿಗೆ ಸಂವಾದ ನಡೆಸಿ ತನ್ಮೂಲಕ ಅವರನ್ನು ಸಂವೇದನಾಶೀಲರನ್ನಾಗಿಸುವ ಮಹತ್ತರ ಯೋಜನೆ ಇದೆ. ಅಲ್ಲದೆ ಚಿಂತನಾ ಶಿಬಿರದ ಶಿಬಿರಾರ್ಥಿಗಳು ಸೆಪ್ಟೆಂಬರ್ ತಿಂಗಳಿನಲ್ಲಿ ಉತ್ತರ, ದಕ್ಷಿಣ, ಪೂರ್ವ ಮತ್ತು ಪಶ್ಚಿಮ – ಈ ನಾಲ್ಕೂ ವಲಯದಲ್ಲಿ ಹುಡುಗರಿಗೆ ತಲುಪಿಸುವ ಸಲುವಾಗಿ ಚಿಂತನಾ ಶಿಬಿರದ ಪ್ರಮುಖ ಅಂಶಗಳನ್ನು ಗಮನದಲ್ಲಿರಿಸಿ ನಾಟಕ, ಹಾಡು ಭಾಷಣ ಹೀಗೆ ಅನುಕೂಲಕರವಾದ ರೂಪಕ್ಕೆ ಬದಲಾಯಿಸಿ ಅದನ್ನು ಪ್ರಸ್ತುತಪಡಿಸುವವರಿದ್ದಾರೆ. ಆದ್ದರಿಂದ ಸಮುದಾಯದಲ್ಲಿ ಬಹಳ ವರ್ಷಗಳಿಂದ ತೊಡಗಿಸಿ ಕೊಂಡಿರುವ ಲಿಂಗದೇವರು ಹಳೇಮನೆ ಶಿಬಿರದ ನಿರ್ದೇಶಕರಾಗಿದ್ದರು. ಹಿರಿಯ ಸಾಹಿತಿಯಾದ ಪ್ರೊ॥ ಜಿ. ಹೆಚ್. ನಾಯಕ್ ಅವರು ಪ್ರಧಾನ ಭಾಷಣವನ್ನು ಮಾಡಿದರು. ಕನ್ನಡ ಪ್ರಾಧ್ಯಾಪಕ ಡಾ॥ ಅರವಿಂದ ಮಾಲಗತ್ತಿ, ಪ್ರೊ॥ ಗೋವಿಂದಯ್ಯ, ರಾಜ್ಯಶಾಸ್ತ್ರದ ಪ್ರಾಧ್ಯಾಪಕ ಪ್ರೊ॥ ಮುಜಾಫರ್ ಅಸಾದಿ ಅವರ ಭಾಷಣಗಳನ್ನೂ ಇಲ್ಲಿ ಆಯ್ದು ಕೊಡಲಾಗಿದೆ. ಶಿಬಿರದಲ್ಲಿನ ಕೆಲವು ಚರ್ಚೆಗಳನ್ನೂ ಇಲ್ಲಿ ಸಂಗ್ರಹಿಸಿದೆ. ವಿದ್ಯಾರ್ಥಿಗಳಿಗೆ ಇದು ಪ್ರಸ್ತುತ ಸಂದರ್ಭದಲ್ಲಿ ವಿಚಾರ ಪ್ರಚೋದಕವಾಗಲಿದ್ದು ಚಿಂತನಮಂಥನಗಳು ಮುಂದುವರೆದು ಚಳವಳಿ/ಆಂದೋಲನಗಳು ವೈಚಾರಿಕ ಸಮರ್ಥನೆ, ಆಲೋಚನೆಗಳ ಗಾಂಭೀರ್ಯವನ್ನು ಮೈಗೂಡಿಸಿಕೊಳ್ಳುವುದೆಂದು ಆಶಿಸಲಾಗಿದೆ.

**ಶ್ರೀ ಟಿ. ಸುರೇಂದ್ರರಾವ್**
ಅಧ್ಯಕ್ಷರು

**ಆರ್. ಕೆ. ಹುಡುಗಿ**
ಪ್ರಧಾನ ಕಾರ್ಯದರ್ಶಿ

ಸಮುದಾಯ ಸಮನ್ವಯ ಸಮಿತಿ, ಬೆಂಗಳೂರು

# ಶಿಬಿರ ನಿರ್ದೇಶಕರ ನುಡಿ

*–ಲಿಂಗದೇವರು ಹಳೇಮನೆ*

'ಅಸಮಾನತೆಯ ಆಸುರೀ ಮುಖಗಳು' ಎಂಬ ಶೀರ್ಷಿಕೆಯಡಿ ಅಸಮಾನತೆ ಮತ್ತು ಅಸ್ಪೃಶ್ಯತೆಯ ಬಗ್ಗೆ ಎರಡು ದಿನಗಳ ಚಿಂತನಾ ಶಿಬಿರವನ್ನು ಏರ್ಪಡಿಸಲಾಗಿದೆ. ಈ ರೀತಿಯ ಮಹೋನ್ನತ ಶಿಬಿರವನ್ನು ಮೈಸೂರಿನಲ್ಲಿ ಆಯೋಜಿಸಬೇಕೆಂದು ಪದಾಧಿಕಾರಿಗಳು ಬಿನ್ನವಿಸಿದಾಗ ಸಂತೋಷದಿಂದ ಒಪ್ಪಿಕೊಂಡೆವು. ಸ್ವಾತಂತ್ರ್ಯಾನಂತರ ಅಸ್ಪೃಶ್ಯತೆಯ ಬಗ್ಗೆ ಕಂಡಕಂಡಲ್ಲಿ ಭಾಷಣಗಳು ನಡೆದಿವೆ. ಅಸ್ಪೃಶ್ಯತೆಯನ್ನು ಹೋಗಲಾಡಿಸಬೇಕೆಂದು ತೀರ್ಮಾನಗಳೂ ನಡೆದಿವೆ. ಸಾಹಿತ್ಯ, ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ಈ ನಾಲ್ಕೂ ಕ್ಷೇತ್ರಗಳ ಮೂಲಕ ಅಸ್ಪೃಶ್ಯತೆಯನ್ನು ಹೋಗಲಾಡಿಸುವ ಕಾರ್ಯಕ್ರಮವನ್ನು ಸರ್ಕಾರವು ಯೋಜನೆ ಹಾಕಿರುವುದಲ್ಲದೆ ಕೆಲವನ್ನು ಕಾರ್ಯರೂಪಕ್ಕೂ ತರಲಾಗಿದೆ. ಏನೇ ಆದರೂ ಅಸ್ಪೃಶ್ಯತೆಯ ಅಮಾನವೀಯ ಮುಖಗಳು ಮತ್ತೆ ತಲೆದೋರುತ್ತಲೇ ಇವೆ. ಇದು ಪತ್ರಿಕೆಗಳ ಮೂಲಕ ಸಾಬೀತಾಗಿದೆ. ಈಚೆಗೆ ಪಂಜಾಬಿನಲ್ಲಿ ಉನ್ನತ ಜಾತಿಯವರು ಅಸ್ಪೃಶ್ಯನನ್ನು ಹೀನಾಯವಾಗಿ ನಡೆಸಿರುವುದು ಇದಕ್ಕೆ ಉದಾಹರಣೆ. 70–80ರ ಸಮಯದಲ್ಲಿ ಕರ್ನಾಟಕದಲ್ಲಿ ನಡೆದ ಅಮಾನುಷ ಆಕ್ರಮಣಗಳು ಇವೆಲ್ಲವುಗಳನ್ನು ಪ್ರತಿಭಟಿಸಲಾಗಿದೆ ಜೊತೆಗೆ ದಾಖಲಿಸಿ ಕೊಳ್ಳಲಾಗಿದೆ. ಆದರೂ ಅಸ್ಪೃಶ್ಯತೆಯನ್ನು ಪೂರ್ಣವಾಗಿ ಓಡಿಸಲು ಸಾಧ್ಯವಾಗಿಲ್ಲ. ನಾವು ನಾಗರೀಕರಾಗಿ ಬಹಳ ಬೆಳವಣಿಗೆ ಕಂಡಿದ್ದೇವೆ ಎಂಬ ಭ್ರಮೆಯಲ್ಲಿದ್ದೇವೆ. ಐಹಿಕ ಸುಖ ಮತ್ತು ಐಹಿಕ ಭೋಗಗಳ ದೃಷ್ಟಿಕೋನದಿಂದ ಗಮನಿಸಿದಾಗ ನಾಗರೀಕರಾಗಿ ಬೆಳೆದಿರುವುದು ಸತ್ಯವೆನಿಸುತ್ತದೆ. ತಾಂತ್ರಿಕವಾಗಿ ಅಭಿವೃದ್ಧಿ ಹೊಂದಿದ್ದೇವೆ. ಸೌಲಭ್ಯಗಳನ್ನು ಸಾಕಷ್ಟು ಮಾಡಿಕೊಂಡಿದ್ದೇವೆ. ಆದರೆ ಸಂಸ್ಕೃತಿ ಮತ್ತು ಮಾನವೀಯತೆಯ ದೃಷ್ಟಿಯಿಂದ ನಾವು ಎಷ್ಟು ಬೆಳೆದಿದ್ದೇವೆ ಎನ್ನುವಂಥದ್ದು ಮುಖ್ಯ ಪ್ರಶ್ನೆಯಾಗುತ್ತದೆ. ಮನುಷ್ಯನ ಬೆಳವಣಿಗೆಗೆ, ಅವನ ವಿಕಾಸಕ್ಕೆ ಕೇವಲ ನಾಗರೀಕತೆಯೇ ಮಾಪಕ ಎನ್ನುವುದನ್ನೂ ಎಲ್ಲರೂ ಗಮನಿಸಬೇಕು. ಇಂದಿನ ದಿನಗಳಲ್ಲಿ ಮನುಷ್ಯನಿಗೆ ಸಮಾನತೆ ಮತ್ತು ಘನತೆ–ಇವೆರಡೂ ಬಹಳ ಮುಖ್ಯ ಎಂದು ನಂಬಿದ್ದೇವೆ, ಅದನ್ನೇ ಪ್ರತಿಪಾದಿಸುತ್ತಿದ್ದೇವೆ ಕೂಡ, ಮಾನವ ಹಕ್ಕುಗಳ ವಿಚಾರ ಬಂದಾಗ ಎಲ್ಲರೂ ಸಮಾನರು ಎಂದು ತಿಳಿದುಬರುತ್ತದೆ ಮತ್ತು ಮಾನವ ಹಕ್ಕುಗಳನ್ನು ನಾವು ಘೋಷಿಸುವಾಗ 'ಘನತೆಯಿಂದ ಬಾಳುತ್ತೇವೆ' ಎನ್ನುವುದೇ ಮೊದಲ ವಾಕ್ಯ. ಆದರೆ ನಿಜವಾಗಿಯೂ ನಾವು ಘನತೆಯನ್ನು ಉಳಿಸಿಕೊಂಡಿದ್ದೇವೆಯೇ ? ಜಗತ್ತಿನ ಯಾವುದೇ ಒಂದು ವ್ಯಕ್ತಿ ಮಾನವೀಯ ಘನತೆಯನ್ನು ಉಳಿಸಲು ಅಸಾಧ್ಯವೆಂದರೆ. ನಾಗರೀಕರಾದ ನಾವೆಲ್ಲರೂ ತಲೆ ತಗ್ಗಿಸಲೇಬೇಕಲ್ಲವೆ ? ಆಗ ಆ ನಾಗರೀಕತೆ ಅರ್ಥಹೀನವಾಗುತ್ತದೆ. ನಮ್ಮಲ್ಲಿ ಅಸ್ಪೃಶ್ಯತೆಯೆನ್ನುವುದು ಶತಮಾನಗಳಿಂದಲೂ ಪೋಷಿಸಿಕೊಂಡು ಬಂದತಹವರು. ಅಷ್ಟೇ ಅಲ್ಲದೆ ಅದನ್ನು ನಾವು legal code ಆಗಿ ಬಳಸಿದ್ದೇವೆ. ಆದರೆ ಇಂದಿನ ಆಧುನಿಕ ಪ್ರಪಂಚದಲ್ಲಿ ನಾವು ಅದನ್ನು ಹೋಗಲಾಡಿಸಲು ಹಲವು ಯೋಜನೆಗಳನ್ನು ಸರ್ಕಾರ ಸಿದ್ಧಪಡಿಸಿದೆ. ಸಂವಿಧಾನಾತ್ಮಕವಾಗಿ ಅದಕ್ಕೆ ಬೇಕಾದ ಸವಲತ್ತುಗಳನ್ನು ಮಾಡಿಕೊಂಡಿದ್ದೇವೆ. ಏನೇ ಆದರೂ ಸಮಾಜದಲ್ಲಿರುವ ವ್ಯಕ್ತಿಗಳ ಮೇಲೆ ಯಾವ ಪ್ರಭಾವವೂ ಬೀರಿಲ್ಲ. ಇಲ್ಲಿ ಎರಡೂ ಸಮಸ್ಯೆಗಳಿವೆ. ಮೊದಲನೆಯದು ಮನುಷ್ಯನ ಅಂತರಂಗದಲ್ಲಿ ಆಗಬೇಕಾದ

ಬದಲಾವಣೆಗಳು ಇವು ಕೇವಲ ಸಂಸ್ಕಾರದ ಮುಖಾಂತರ, ವರ್ತನಾ ನಿಯಮದ ಮುಖಾಂತರ ಮಾತ್ರ ಸಾಧ್ಯ. ಎರಡನೆಯ ಸಮಸ್ಯೆ ನಮ್ಮ ಮುನ್ನಡೆಸುವ ಸರ್ಕಾರವು ಹಾಕಿಕೊಳ್ಳುವ ಯೋಜನೆಗಳು, ನಿಯಮಗಳು ಎಂದರೆ ಸಂರಕ್ಷಿಸುವುದರ ಜೊತೆಗೆ ಉಲ್ಲಂಘಿಸುವ ಅಪರಾಧಿಗಳನ್ನು ಶಿಕ್ಷಿಸುವಂತಹ ಗುರಿಯನ್ನೂ ಕೂಡ ಅದು ಹೊಂದಿರುತ್ತದೆ. ಇವೆರಡೂ ಸಮಸ್ಯೆಯಿಂದಲೇ ಅಸ್ಪೃಶ್ಯತೆಯನ್ನು ಸಂಪೂರ್ಣವಾಗಿ ಹೋಗಲಾಡಿಸಲು ಅಸಾಧ್ಯವಾಗಿದೆ. ಅಸ್ಪೃಶ್ಯತೆಯನ್ನು ನಾವು ನಿವಾರಿಸಲು ಹೊರಟಾಗ ಅದಕ್ಕೆ ಮಾಡಿಕೊಂಡಂತಹ Provisionಗಳು ನಮ್ಮ ಸ್ವಾತಂತ್ರ್ಯೋತ್ತರದ ಸಂದರ್ಭದ ಅನೇಕ ಸಂರಚನೆಗಳನ್ನು ಸೃಷ್ಟಿಸಿಕೊಳ್ಳಲು ಅನುವು ಮಾಡಿಕೊಟ್ಟಿವೆ. ನಮ್ಮ ಸಾಮಾಜಿಕ ಸಂರಚನೆ ಅಥವಾ Social construct ಭಿನ್ನವಾದ ರೂಪ ತಾಳುತ್ತ ಹೋಗುತ್ತದೆ. 'ಮೀಸಲಾತಿ'ಯ ಉದಾಹರಣೆ ತೆಗೆದುಕೊಂಡಾಗ ಪ್ರತಿಯೊಬ್ಬನಿಗೂ ಅವಕಾಶ ನೀಡುವುದು ಸಾಮಾಜಿಕ ನ್ಯಾಯ (Social Justice) ಎಂದು ತಿಳಿದುಬರುತ್ತದೆ. ಸಾಮಾಜಿಕ ನ್ಯಾಯವನ್ನು ಸಂವಿಧಾನಾತ್ಮಕವಾಗಿ ಕಾಪಾಡುವುದನ್ನು ಒಪ್ಪಿಕೊಂಡಿದ್ದೇವೆ. ದುರ್ಬಲ ವ್ಯಕ್ತಿಗೂ ಕೂಡ ಸಮಾನವಾದ ಅವಕಾಶವನ್ನು ಕಲ್ಪಿಸಿಕೊಡಬೇಕು. ಈ ರೀತಿಯ ಸಾಮಾಜಿಕ ನ್ಯಾಯದ ಅಡಿಯಲ್ಲಿ ಅನೇಕ ಸಾಮಾಜಿಕ ಸಂರಚನೆಗಳನ್ನು ರಚಿಸುತ್ತಾ ಹೋಗುತ್ತೇವೆ. ಅದರಲ್ಲಿ 'ಮೀಸಲಾತಿ' ಪ್ರಮುಖವಾಗಿ ನಿಲ್ಲುತ್ತದೆ. ಯಾರಿಗೆ, ಹೇಗೆ, ಎಷ್ಟರಮಟ್ಟಿಗೆ ಮೀಸಲಾತಿಯನ್ನು ಕೊಡಬೇಕು ಎಂಬುದನ್ನು ಸಂವಿಧಾನದಲ್ಲಿ ಹೇಳಲಾಗಿದೆ. ಇದನ್ನು ರಚಿಸುವಾಗಲೂ ಕೂಡ ಕೆಲವು ಪೂರ್ವ ನಿಯಮಗಳು ಇರುತ್ತವೆ. ಅವೆಂದರೆ–ಎಲ್ಲಿಯವರೆಗೆ ನಾವು ಅಂದುಕೊಂಡಂತೆ ಸುಸೂತ್ರವಾಗಿ ನಡೆದುಬಂದರೆ ನಾವು ಇಂತಿಷ್ಟು ವರ್ಷಗಳು ಮೀಸಲಾತಿಯನ್ನು ಜಾರಿಗೆ ತರಬಹುದು. ಆದರೆ ಆ ರೀತಿ ಆಗದಿದ್ದಾಗ ಆಗುವ ಪರಿಣಾಮವೇನು ? ಈಚೆಗೆ ಮೂರು ತಿಂಗಳಿಂದ 'ಮೀಸಲಾತಿ'ಯ ಬಗ್ಗೆ ಭುಗಿಲೆದ್ದ ಚರ್ಚೆ ಪ್ರಾರಂಭವಾಯಿತು. ಅದರಲ್ಲೂ ಉನ್ನತ ಶಿಕ್ಷಣಕ್ಕೆ ಸಂಬಂಧಪಟ್ಟ ಹಾಗೆ ಕೇಂದ್ರ ಸರ್ಕಾರದವರು IIM ಮುಂತಾದ ವಿದ್ಯಾಸಂಸ್ಥೆಗಳಲ್ಲಿ ಮೀಸಲಾತಿ ಹೇಗೆ ನೀಡಬೇಕು ಎಂಬ ಪ್ರಶ್ನೆ ಉದ್ಭವವಾಯಿತು. ಹೀಗಿರುವಾಗಲೇ ವೈದ್ಯರು, ವೈದ್ಯಕೀಯ ವಿದ್ಯಾರ್ಥಿಗಳು ಪ್ರತಿಭಟನೆಯನ್ನು ಆರಂಭ ಮಾಡಿದರು. ಈ ಪ್ರತಿಭಟನೆ ಸ್ವರೂಪ ಅತ್ಯಂತ ಭೀಕರವಾಗಿತ್ತು. ಭಾರತವು ಇಬ್ಭಾಗವಾಗಬಹುದು ಎಂದು ಪ್ರಜ್ಞಾವಂತರು ಯೋಚಿಸುವ ಮಟ್ಟದಲ್ಲಿ ಪ್ರತಿಭಟನೆ ನಡೆಯಿತು. ರೋಗಿಗಳ ಚಿಂತಾಜನಕ ಸ್ಥಿತಿಯನ್ನು ಲೆಕ್ಕಿಸದೆ ಉನ್ನತ ಶಿಕ್ಷಣದಲ್ಲಿ ಮೀಸಲಾತಿ ಇರಬಾರದೆಂದು ವೈದ್ಯರು ವಾದಿಸತೊಡಗಿದರು. ಈ ಮೀಸಲಾತಿಯ ಮೂಲಕ ಗುಣ ಅಥವ ಶ್ರೇಷ್ಠತೆ ಕಡಿಮೆಗೊಳ್ಳುತ್ತಿದೆ ಎನ್ನುವುದು ಅವರ ವಾದ. ಅನೇಕ ಕಾಲದಿಂದಲೂ ಈ ವಾದ ಹೀಗೆಯೇ ಉಳಿದುಕೊಂಡುಬಂದಿದೆ. ನಾರಾಯಣ ಮೂರ್ತಿ ಅಂತಹವರು ಈ ರೀತಿಯ ವಾದವನ್ನು ಮುಂದುವರಿಸಲಿಕ್ಕೆ ಜೀವಂತವಿದ್ದಾರೆ. ನಾರಾಯಮೂರ್ತಿಯವರು ಬಹಿರಂಗವಾಗಿ ಉನ್ನತ ಶಿಕ್ಷಣದಲ್ಲಿ ಮೀಸಲಾತಿ ಬೇಡ ಎಂದು ಹೇಳಿ ವೈದ್ಯರನ್ನು ಬೆಂಬಲಿಸಿದರು. ಈ ರೀತಿ ನಾರಾಯಣಮೂರ್ತಿಯವರಂತಹ ಬಂಡವಾಳಶಾಹಿಗಳಿಗೆ ಸಾಮಾಜಿಕ ಸಂರಚನೆಯ ಬಗ್ಗೆ ಏನೂ ಅರ್ಥವಾಗುವುದಿಲ್ಲ. ಅಂತಹ ಬಂಡವಾಳಶಾಹಿಗಳು ತಾವು ಬಂಡವಾಳ ತೆಗೆಯಲು ಶ್ರೇಷ್ಠ ಮಿದುಳು ಬೇಕು ಮತ್ತು ಅಂತಹ ಶ್ರೇಷ್ಠ ಮಿದುಳು ಕೇವಲ ಅಂಕಗಳಿಂದ ಪಡೆಯುವ ಮುಖಾಂತರ ಎಂದು ತಿಳಿದಿರುತ್ತಾರೆ. ಆದರೆ ಇಂತಹ ಅಂಕಗಳನ್ನು ಪಡೆಯುವ ಇಂಜಿನಿಯರುಗಳು ಕೆಲವೊಮ್ಮೆ ಅಂಕಗಳನ್ನು ಪಡೆಯದೇ Donation ಕೊಟ್ಟು ವಿದ್ಯಾಸಂಸ್ಥೆ ಸೇರಿರುತ್ತಾರೆಂಬುದನ್ನು ಮರೆತಿರುತ್ತಾನೆ. ಈ ರೀತಿಯ ಚರ್ಚೆ ಆರಂಭಗೊಂಡಾಗಿನಿಂದಲೂ ಇದೀಗ ಉದಾರ

ಮನಸ್ಸಿನವರೂ (Liberal mind) ಕೂಡ ಏತಕ್ಕಾಗಿ ಮೀಸಲಾತಿ ಮುಂದುವರೆಸಬೇಕೆಂದು ಗಲಬಿಲಿಗೆ ತುತ್ತಾಗಿರುವುದು ಸುಳ್ಳಲ್ಲ. Moderate ಆಗಿ ಇದ್ದವರೂ ಕೂಡ ಇದಕ್ಕೆ ದನಿಗೂಡಿಸುವ ಪ್ರಯತ್ನ ಮಾಡುತ್ತಿಲ್ಲ. ಇದು ಆಘಾತಕಾರಿಯಾಗಿದೆ.

ಹೌದು, ಮೀಸಲಾತಿಯನ್ನು ನಿಲ್ಲಿಸಬೇಕು. ಆದರೆ ಇದರಿಂದಾಗುತ್ತಿರುವ ಉಪಯೋಗ ಗಳನ್ನು ಗಮನಿಸಬೇಕಲ್ಲವೆ?

ಆಗ ಉದ್ಭವಗೊಳ್ಳುವ ಪ್ರಶ್ನೆ ಎಂದರೆ ಯಾರಿಗೆ ಮೀಸಲಾತಿ ನೀಡಲಾಗುತ್ತಿದೆ ಎಂಬುದು. ಸಮಾಜದಲ್ಲಿ ಅತ್ಯಂತ ಹಿಂದುಳಿದ ವರ್ಗಗಳಾದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಂತಹವರಿಗೆ ಮೀಸಲಾತಿ ನೀಡಲಾಗುತ್ತಿದೆ. ಇದು Challenging ಆಗಿ ಶೈಕ್ಷಣಿಕ ಕ್ಷೇತ್ರದಲ್ಲಿ ಪರಿಣಮಿಸುತ್ತದೆ. ಶಿಕ್ಷಣ ಎನ್ನುವುದು ಸಾಮಾಜಿಕ ಸ್ಥಾನಮಾನ ಮತ್ತು ಆಧುನಿಕತೆಯನ್ನು ತಂದುಕೊಡುತ್ತಿದೆ.

ಈ ಹಿನ್ನೆಲೆಯಲ್ಲಿ ನಾವು ವಿಷಯವನ್ನು ಚರ್ಚಿಸಿದಾಗ ಯುವ ಮನಸುಗಳು ವಿಷಯವನ್ನು ಸುಸ್ಪಷ್ಟವಾಗಿ ಗ್ರಹಿಸಲು ಸಾಧ್ಯ ಎನ್ನುವುದೇ ನಿಜವಾದ ಗುರಿಯಾಗಿದೆ. ಏಕೆಂದರೆ ಸಮುದಾಯ ಆರಂಭಗೊಂಡಾಗಿನಿಂದಲೂ ಈ ರೀತಿಯ ಹಲವಾರು ವಿಷಯಗಳ ಪರ ಮತ್ತು ವಿರೋಧದ ಅಂಶಗಳನ್ನು ಆಮೂಲಾಗ್ರವಾಗಿ ತಿಳಿಯುವ ಪ್ರಯತ್ನ ಮಾಡುತ್ತಲೇ ಬಂದಿದ್ದೇವೆ.

ನಾವು ಯಾವ ರೀತಿಯಾದಂತಹ ನಿರ್ಣಯಕ್ಕೆ ಬರಬೇಕು ? ಪ್ರತಿಯೊಂದು ಹಂತದಲ್ಲೂ ಅಸ್ಪೃಶ್ಯತೆ ಇದೆ. ಕೆಲ ಗ್ರಾಮಗಳಲ್ಲಿ 'ಜೀತ ಪದ್ಧತಿ' ಇನ್ನೂ ಹಾಗೆಯೇ ಜೀವಂತವಾಗಿದೆ. 'ಜೀತ'ದ ವಿಚಾರ ಬರುತ್ತಿದ್ದಂತೆಯೇ ಸರ್ಕಾರ ಕೆಂಡಾಮಂಡಲವಾಗುತ್ತದೆ. ಹಿಂದೆ ಬಹಿರಂಗವಾಗಿ ಜೀತದ ಬಗ್ಗೆ ಚರ್ಚೆ ನಡೆದಾಗ 'ನಮ್ಮಲ್ಲಿ ಜೀತ ಪದ್ಧತಿ ಇಲ್ಲ. ಅದನ್ನು ಸಂಪೂರ್ಣವಾಗಿ ನಿರ್ಮೂಲನೆ ಮಾಡಿದ್ದೇವೆ ಎನ್ನುವ ವಾದ ಕೇಳಿಬರುತ್ತದೆ. ಹಾಗೆ ನೋಡಿದರೆ Infosys ನಲ್ಲಿಯೂ ಕೂಡ 'Bonded Labour' ಇದೆ ಏಕೆಂದರೆ ಅಲ್ಲಿಯೂ agreement ನಂತರವೇ ಕೆಲಸ ದೊರಕುತ್ತದೆ. ಇಂದಿಗೂ ಕೂಡ ಗ್ರಾಮೀಣ ಪ್ರದೇಶಗಳಲ್ಲಿ ಹೊರಗಡೆ ಕುಳ್ಳಿರಿಸಿ ಆಹಾರ ನೀಡುವ ಪದ್ಧತಿ ಮುಂದುವರೆದಿದೆ. ಇದಕ್ಕೆ ನಿದರ್ಶನ ಇಲ್ಲಿದೆ. ಈಚೆಗೆ ಗುಲ್ಬರ್ಗದಲ್ಲಿ ಯಾವುದೋ ಮದುವೆಯ ಮನೆಯಲ್ಲಿ ದೇವಸ್ಥಾನದಲ್ಲಿ ಮಲಗಿದ್ದರು ಎನ್ನುವ ಕಾರಣಕ್ಕಾಗಿ ಅವರನ್ನು ಅಮಾನವೀಯವಾಗಿ ಹೊಡೆದ ಘಟನೆಯ ಬಗ್ಗೆ ಪತ್ರಿಕೆಗಳಲ್ಲಿ ನೋಡಿ ಆಗಿದೆ.

ವಿಶ್ವವಿದ್ಯಾಲಯ ಎನ್ನುವುದು ಅತ್ಯಂತ ಪವಿತ್ರವಾದ ಸ್ಥಳ ಅಲ್ಲಿಯೂ ಅಸ್ಪೃಶ್ಯತೆ ಇದೆ. ಉದಾಹರಣೆಗೆ ನಮ್ಮಲ್ಲೇ ಇರುವ ಗಂಗೋತ್ರಿ. ಅಲ್ಲಿ ನಮಗೆ ಉದಾಹರಣೆಗಳು ದೊರೆಯುತ್ತವೆ. ನಾವು ಇದನ್ನು ಅರ್ಥಮಾಡಿಕೊಳ್ಳುವ ಜೊತೆಗೆ ನಮ್ಮ ಕಾರ್ಯಕ್ರಮ ಗಳಲ್ಲಿ ಇದರ ಬಗ್ಗೆ ಮಾತನಾಡಬೇಕು. ಸತ್ಯ ಎಂದಿಗೂ ಸತ್ಯವೇ. ಅಸ್ಪೃಶ್ಯತೆ ಎನ್ನುವಂತಹ ಪಿಡುಗು ನಮ್ಮ ದೇಶ ಬಿಟ್ಟು ಹೋಗಲೇಬೇಕು. ಅಂತಾರಾಷ್ಟ್ರೀಯ ಮಟ್ಟದಲ್ಲಿ ವರ್ಣಭೇದದ ಸಮಸ್ಯೆ ಇದ್ದೇ ಇದೆ. ವರ್ಣಭೇದ ಮಾತ್ರ ಅಂತಾರಾಷ್ಟ್ರೀಯ ಸಮಸ್ಯೆ ಆಯಿತೇ ಹೊರತು ಅಸ್ಪೃಶ್ಯತೆ ರಾಷ್ಟ್ರೀಯ ಸಮಸ್ಯೆಯಾಗಿಯೂ ಗಣನೆಗೆ ತೆಗೆದುಕೊಳ್ಳಲಾಗಿಲ್ಲ.

ದಕ್ಷಿಣ ಆಫ್ರಿಕಾದಲ್ಲಿ ಮೂರು ವರ್ಷಗಳ ಹಿಂದೆ ನಡೆದ ಸಮ್ಮೇಳನದಲ್ಲಿ ಅಸ್ಪೃಶ್ಯತೆಯನ್ನು ಅಂತಾರಾಷ್ಟ್ರೀಯ ಸಮಸ್ಯೆಯನ್ನಾಗಿಸುವ ಆಲೋಚನೆಯಲ್ಲಿತ್ತು. ಆದರೆ ಅಂದಿನ NDA ಸರ್ಕಾರ ಅದನ್ನು ನಿಲ್ಲಿಸಿತು. ಅಲ್ಲದೆ ಈ ಸಮಸ್ಯೆ ನಾವು ಬಗೆಹರಿಸಿದ್ದೇವೆ. ಈ ಸಮಸ್ಯೆಯು ಅಂತಿಮಘಟ್ಟದಲ್ಲಿದೆ ಎಂದು ಹೇಳಿದರು. ಆದರೆ ಇದು ಭ್ರಮೆ ಈಗಲೂ ಕೂಡ ಪೂರ್ಣ ಪ್ರಮಾಣದಲ್ಲಿ ಇದು ಮುಂದುವರೆದಿದೆ. ಮುಂಧುವರೆದಂತಹ ಜನಾಂಗವು ದಲಿತರಿಗೆ ನೀಡಲಾಗಿರುವ ಮೀಸಲಾತಿಯಿಂದ ತಮಗೆ ಅನ್ಯಾಯವಾಗುತ್ತಿದೆ ಎಂದು ಬೊಬ್ಬೆ

ಹೊಡೆಯುತ್ತಿದ್ದಾರೆ. ಆದರೆ ವಾಸ್ತವವಾಗಿ ನೋಡಿದರೆ ಎಷ್ಟು ಪ್ರತಿಶತ (Perecent) ತಲುಪುತ್ತಿದೆ. ಅಲ್ಲಿಯೂ ಕೂಡ ನಡೆಯುತ್ತಿರುವ ಅನ್ಯಾಯ ನಮಗೆ ತಿಳಿಯುತ್ತದೆ. ದಿನಕ್ಕೆ ನಾಲ್ಕೈದು ಬಾರಿಯಾದರೂ ವಿಷಯವು ನಮ್ಮ ಮಾತಿನಲ್ಲಿ ತೂರಿ ಬರುತ್ತದೆ ಎನ್ನುವುದು ಸುಳ್ಳಿನ ಮಾತಲ್ಲ ಅವಕಾಶ ಎನ್ನುವುದು ತನಗೂ ಸಿಗಬೇಕು ಪರರಿಗೂ ಸಿಗಬೇಕು ಎನ್ನುವ ಬದಲು ಬೇರೆಯವರ ಅವಕಾಶವನ್ನು ಕಿತ್ತು ತಾನು ಪಡೆಯಬೇಕು ಎನ್ನುವುದು ಹೆಚ್ಚುತ್ತಿದೆ. ಸಾಮಾಜಿಕ ನ್ಯಾಯದ ದೃಷ್ಟಿಯಿಂದ ನೋಡಿದರೆ ಅವಕಾಶಹೀನರಿಗೆ ಅವಕಾಶ ಕಲ್ಪಿಸಿ ಕೊಡುವುದು ಬಹಳ ಮುಖ್ಯ ಆದರಿಂದ ಈ ಚಿಂತನಾ ಶಿಬಿರ ಬಹುಮುಖ್ಯ ಎನಿಸುತ್ತದೆ.

ನಾವು ಸಮುದಾಯ ಆರಂಭಿಸಿದ ದಿನಗಳಿಂದ ಸುಮಾರು ಹತ್ತು ವರ್ಷಗಳು ನಾವು ಈ ವಿಷಯವನ್ನು ನಾಟಕಗಳ ಮುಖಾಂತರ ಬಿಂಬಿಸುವ ಪ್ರಯತ್ನವನ್ನು ಮಾಡಿದ್ದೇವೆ. 'ಪತ್ರೆ ಸಂಗಪ್ಪನ ಕೊಲೆ' ಎನ್ನುವಂತಹ ನಾಟಕ ಇಂದಿಗೂ ಕೂಡ ಮಹತ್ತರ ಪ್ರದರ್ಶನದ ನಾಟಕ. ಭದ್ರಾವತಿಯ ಒಬ್ಬ ಜಮೀನ್ದಾರನ ಬಳಿ ಕೆಲಸ ಮಾಡುತ್ತಿದ್ದ ದಲಿತನು ಕ್ರೌರ್ಯಕ್ಕೆ ಈಡಾಗಿ ಕೊಲೆಯಾದ ನೈಜ ಘಟನೆಯಾಧಾರಿತ ನಾಟಕವದು. ನಂತರ ಡಾ॥ ಸಿದ್ಧಲಿಂಗಯ್ಯ ವಿರಚಿತ ಪಂಚಮ ನಾಟಕವನ್ನು ಕೈಗೆತ್ತಿಕೊಂಡೆವು. ಪಂಚಮ ನಾಟಕ ಬಹಳ ಪ್ರಸ್ತುತವಾಗಿ ಕಂಡು ಬರುತ್ತದೆ. ಅಧಿಕಾರಶಾಹಿ, ಪುರೋಹಿತಶಾಹಿ ಮತ್ತು ರಾಜಕೀಯಶಾಹಿ ಹೀಗೆ ಮೂರೂ ಹೇಗೆ ಒಬ್ಬ ದಲಿತನನ್ನು ಆಕ್ರಮಿಸುತ್ತವೆ ಎಂದು ನಿರೂಪಿಸುವ ನಾಟಕ. ಒಬ್ಬ ದಲಿತ ನಾದವನು ಈ ಮೂರರ ವಿರುದ್ಧ ಹೋರಾಡಬೇಕಾದ ಪರಿಸ್ಥಿತಿ ಬಂದಿದೆ. ಆದರೆ ನಮ್ಮಂತಹ ಮುಂದುವರೆದ ಜನಾಂಗಕ್ಕೆ ಈ ಯಾವ ಶಾಹಿಗಳೂ ತಮ್ಮ ವಿರುದ್ಧ ಕೆಲಸ ಮಾಡುವುದಿಲ್ಲ. ಆದರೆ ಒಬ್ಬ ಪಂಚಮನಿಗೆ 'ನ್ಯಾಯಾಂಗ'ವೂ ಸೇರಿದಂತೆ ಈ ನಾಲ್ಕು ಬಲಗಳು ಹೇಗೆ ವಿರುದ್ಧವಾಗಿ ಕೆಲಸ ಮಾಡುತ್ತಿವೆ ಎನ್ನುವುದು ಮುಖ್ಯವಾಗುತ್ತವೆ. ಹಾಗೆಯೇ ನಾಟಕದ ಕಡೆಯಲ್ಲಿ ಈ ನಾಲ್ಕು ಬಲಗಳ ವಿರುದ್ಧ ಎದ್ದು ನಿಲ್ಲುತ್ತಾನೆ ಎಂದು ಪ್ರತಿಪಾದಿಸಲಾಗಿದೆ. ನಾಲ್ಕೈದು ವರ್ಷಗಳ ಹಿಂದೆ ಯಾವ ಯಾವ ಕ್ಷೇತ್ರದಲ್ಲಿ ಮೀಸಲಾತಿ ಅನುಸರಿಸಲಾಗುತ್ತಿದೆ ಎನ್ನುವಂತಹ Statistics ಬಹಿರಂಗ ಪಡಿಸಲಾಗುತ್ತಿತ್ತು. ಆಶ್ಚರ್ಯವೆಂದರೆ 30%ರಷ್ಟು ಕಾರ್ಯರೂಪಕ್ಕೆ ತಂದಿರಲಿಲ್ಲ. ಅಂದರೆ ತೀವ್ರ ಕಾಳಜಿ ಇರುವಂತೆ ವರ್ತಿಸುವ ಸರ್ಕಾರವು ಸರಿಯಾದ ಮೀಸಲಾತಿ ಸರಿಯಾದ ಸಂದರ್ಭಗಳಲ್ಲಿ ನೀಡದೆ ಹಲವು ಹುದ್ದೆಗಳ ಹಾಗೆಯೇ ಉಳಿದದ್ದು ಬೆಳಕಿಗೆ ಬಂದಿತು. ಇವೆಲ್ಲವೂ exceutive engineer ಒಬ್ಬ Supreme courtಗೆ ಹೋದಾಗಲೇ ಎಲ್ಲರಿಗೂ ತಿಳಿಯಿತು. ಮಾತನಾಡುವಾಗ ಮಾತ್ರ Social justice ಆದರೆ ಅದನ್ನು ಕಾರ್ಯರೂಪಕ್ಕೆ ತಂದಿಲ್ಲ ಎನ್ನುವುದು ಕಟು ಸತ್ಯ.

ಅಸ್ಪೃಶ್ಯತೆ ಎನ್ನುವುದು ನಿಜವಾಗಿ ಅಸುರೀ ಮುಖ. ಇದು ಅದ್ವಿತೀಯವಾದ ಮಾತು. Rituals, ಸಂಸ್ಕೃತಿ, ಸಂಪ್ರದಾಯದ ಹೆಸರಿನಲ್ಲಿ ಅಸುರೀ ಮುಖಗಳಿವೆ. ಆದರೆ ಈ ರೀತಿಯ ಸಂಪ್ರದಾಯಗಳನ್ನು ಪಾಲಿಸಬೇಕೆ ಎನ್ನುವುದೇ ನಿಜವಾದ ಪ್ರಶ್ನೆಯಾಗುತ್ತದೆ. ಅಸ್ಪೃಶ್ಯತೆಯ ಬಗ್ಗೆ ಮಾತನಾಡಲು ಆರಂಭಿಸಿದರೆ ಇಡೀ ಹಿಂದೂ ಸಮಾಜದ ಕರಾಳ ಮುಖಗಳು ಅದರ ಭಾಗವಾಗಿ ಬರುತ್ತದೆ. ಎಲ್ಲ ವರ್ಗಗಳೂ ಎಲ್ಲ ಪಾತಳಿಗಳೂ ಅದರೊಳಗೆ ಬರುತ್ತದೆ. ಏಕೆಂದರೆ ಅವರೆಲ್ಲರೂ ಇದರ ಮೇಲೆ ನಿಂತಿದ್ದಾರೆ. ಎಷ್ಟೇ ಪ್ರಗತಿಪರನಾಗಿದ್ದರೂ ಕೂಡ ಎದೆ ಮುಟ್ಟಿ ತಾನು ಅಸ್ಪೃಶ್ಯತೆ ಎಲ್ಲಿಯೂ ಪಾಲಿಸಲಿಲ್ಲವೇ ಎಂದು ಕೇಳಿಕೊಂಡರೂ, ಏನೇ ಆದರೂ ಒಂದು ಹಂತದಲ್ಲಿ ಮಾಡಿಯೇ ಇರುತ್ತಾನೆ. ಇಂತಹ ವಿಷಮಯವಾದ ಸಾಮಾಜಿಕ ರಚನೆಯಲ್ಲಿ ನಾವು ಇದ್ದೇವೆ ಎನ್ನುವುದು ವಿಷಾದನೀಯ. ಈ ಚಿಂತನಾ ಶಿಬಿರವು ಚಿಂತನೆಗೆ ಬೇಕಾದ ಗ್ರಾಸ ನೀಡುತ್ತದೆ ಎನ್ನುವ ಭರವಸೆ ನಮ್ಮದು.

# ವಿಷಯ ಪ್ರವೇಶ

*– ಪ್ರೊ|| ಜಿ.ಎಚ್. ನಾಯಕ್*

ನಮಸ್ಕಾರ ಅವಕಾಶಕ್ಕಾಗಿ ನಾನು ಕೃತಜ್ಞನಾಗಿದ್ದೇನೆ. ನನ್ನ ಮಾತುಗಳು ಮುಂದೆ ಮಾತನಾಡುವವರ ಭಾಷಣಕ್ಕೆ ಪೂರ್ವ ಪೀಠಿಕೆಯಾಗಬಹುದು. ಒಂದು ಸಮಗ್ರ ಅಧ್ಯಯನ ಆಗಲಾರದು ಎನಿಸುತ್ತದೆ. ನಾವುಗಳೂ ಯಾರೂ ಹಿನ್ನಲೆಯ ಬಗ್ಗೆ ಗಮನಹರಿಸದೆ ಕೇವಲ ಎದುರಿಗೆ ಬಂದು ನಿಂತಿರುವ ಸಮಸ್ಯೆಯನ್ನು ಮಾತ್ರ ಅವಲೋಕಿಸುತ್ತಿದ್ದೇವೆ. ಈಗ ತಲೆದೋರಿರುವ ಈ ಪಿಶಾಚಿಗಣ ನಾವು ಎದುರಿಸಬೇಕಾದಷ್ಟು ಸರಳವಾಗಿ, ಸುಲಭವಾಗಿ ಇಲ್ಲ. ಹೀಗೆ ಹೇಳುವಾಗ ನನ್ನ ಅಭಿಪ್ರಾಯ ನಿಮ್ಮೆಲ್ಲರ ಅಭಿಪ್ರಾಯ ಆಗಬೇಕು ಎಂದು ನಾನು ಬಯಸುವುದಿಲ್ಲ. ಏಕೆಂದರೆ ನನ್ನ ಅಭಿಪ್ರಾಯವನ್ನು ಪ್ರಶ್ನಿಸುವ ಮತ್ತೆ ಅದಕ್ಕೆ ಉತ್ತರ ಕಂಡುಹಿಡಿದದ್ದೇ ಆದರೆ ನನ್ನ ಮಾತುಗಳು ಅರ್ಥಪೂರ್ಣವಾಗುತ್ತದೆ. ಈಗಿನ ಕಾಲದಲ್ಲಿ ಸಮಸ್ಯೆಗಳು ಬಹಳ ಸಂಕೀರ್ಣವಾಗಿವೆ. ಅವುಗಳಿಗೆ ನಿರ್ದಿಷ್ಟವಾದ ಉತ್ತರವೆಂಬುದಿಲ್ಲ. ಆದ್ದರಿಂದ ಚಿಂತನಾ ಶಿಬಿರಗಳು ತಲೆದೋರುತ್ತಿವೆ. ಬಹುಮುಖ್ಯವಾಗಿ ನಾವುಗಳು ಈಚಗಿನ ವರ್ಷಗಳಲ್ಲಿ ಪೂರ್ವಗ್ರಹಿಕರಾಗುತ್ತಿದ್ದೇವೆ. ಮೊದಲು ಮಾತನ್ನು ಕೇಳುವಂತವರಾಗಬೇಕು. ಪ್ರಜಾಪ್ರಭುತ್ವದಲ್ಲಿ ಇದು ಬಹಳ ಮುಖ್ಯವಾಗುತ್ತದೆ.

ಜಾತಿ–ಧರ್ಮದ ಬಗ್ಗೆ ಇಂದು ಮಾತನಾಡಲು ಬಹಳ ಕಷ್ಟವಾಗುತ್ತಿದೆ. ಪರವಾಗಿ ಮಾತನಾಡಿದರೆ ಕೆಲವರಿಗೆ ಸಮಾಧಾನವಾದೀತು. ವಿರೋಧವಾಗಿ ಮಾತನಾಡಿದರೆ ಉಳಿದವರಿಗೆ ಸಮಾಧಾನವಾಗುತ್ತಿದೆ. ಈ ಕಪ್ಪು–ಬಿಳುಪನ್ನು ಬಿಟ್ಟು ಮೂರನೆಯ ಕಣ್ಣನ್ನು ಇರಿಸಿಕೊಂಡಂತಹವರು ಅತ್ಯಂತ ವಿರಳ. ಹೀಗೆ ಹೊಸದೊಂದು ನೆಲೆಯ ಮೂಲಕ ನಾವು ತಾಳ್ಮೆಯಿಂದ ಸಹನೆಯಿಂದ ಇರಬೇಕು ಎನ್ನುವುದು ನನ್ನ ಪೀಠಿಕೆಯ ಮಾತು.

ನೆರೆದಿರುವ ಎಳೆಯ–ಗೆಳೆಯರಿಗೆ ಕಿವಿಮಾತೊಂದಿದೆ. ಅನೇಕ ಸಮಸ್ಯೆಗಳು ಇದೀಗ ಸಂಕೀರ್ಣವಾಗಿ ನಿಂತಿವೆ. ಅವುಗಳಿಗೆ ಸೂಕ್ತ ಪರಿಹಾರವನ್ನು ನೀವೇ ಕಂಡುಹಿಡಿಯಬೇಕು. ಸ್ವತಂತ್ರವಾಗಿ ಆಲೋಚಿಸುವವರೂ ಭಿನ್ನವಾಗಿ ಯೋಚಿಸುತ್ತಾರೆ ಎನ್ನುವುದೂ ಸತ್ಯದ ಮಾತು. ಅಲ್ಲಮ ಪ್ರಭುವಿನ ಒಂದು ವಚನ ಇಂತಿದೆ.

"ಕೊಟ್ಟು ಕುದುರೆಯನೇರಲರಿಯದೆ
ಮತ್ತೊಂದು ಕುದುರೆಯನೇರಬಯಸುವವರು, ವೀರರೂ ಅಲ್ಲ ಧೀರರೂ ಅಲ್ಲ
ಇದು ಕಾರಣ ನೆರೆ ಮೂರು ಲೋಕವೆಲ್ಲವೂ
ಹಲ್ಲವಣವ ಹೊತ್ತುಕೊಂಡು ತೊಳಲುತ್ತಿದ್ದಾರೆ
ಗುಹೇಶ್ವರ ಲಿಂಗವನೆತ್ತಬಲ್ಲರು"

ಅಸ್ಪೃಶ್ಯತೆ–ಮೀಸಲಾತಿ ಇವುಗಳ ಸಂಬಂಧವನ್ನು ನಿರೂಪಿಸುವ ವಚನವಿದು. ಈ ಸಮಸ್ಯೆಗಳಿಗೆ ಸಂಬಂಧಪಟ್ಟಂತೆ ನಮ್ಮ ಸಂವಿಧಾನವು ಕೊಟ್ಟಿರುವುದನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಹೋಗುವ ಹೊಣೆಹೊತ್ತವರು ಅಷ್ಟೇ ಜವಾಬ್ದಾರಿಯುತವಾಗಿ ಪಾಲಿಸಿದ್ದರೆ ನಾವು ಇಂದು ಏನನ್ನೋ ಹುಡುಕುವ ಪ್ರಯತ್ನ ಮಾಡುತ್ತಿರಲಿಲ್ಲ. ಒಂದೊಮ್ಮೆ ದೊಡ್ಡ ಎಡರುಗಳು ಕಂಡುಬಂದಲ್ಲಿ ತಿದ್ದುಪಡಿಗೂ ಅವಕಾಶವಿದೆ. ಎಲ್ಲ ರೀತಿಯ ರಕ್ಷಣೆ ಸಂವಿಧಾನ ದಲ್ಲಿದೆ. ಆದರೆ ವಾಸ್ತವವಾಗಿ ಅರ್ಧಪಾಲಿನಷ್ಟೂ ಇಲ್ಲ ಎನ್ನುವುದು ಬೇಸರದ ಸಂಗತಿ.

ಇಲ್ಲಿಯವರೆಗೆ ಅರ್ಧಶತಮಾನಕ್ಕೂ ಹೆಚ್ಚು ಕಾಲ ಏಕೆ ಇನ್ನೂ ಈ ವಿಷಯದ ಬಗ್ಗೆ ಚರ್ಚಿಸುತ್ತಿದ್ದೇವೆ ಎನ್ನುವ ಪ್ರಶ್ನೆ ನನ್ನದು. ಅಂಬೇಡ್ಕರ್ ಅವರು ಸ್ವಾತಂತ್ರ್ಯ ತಡವಾಗಿ ಬಂದರೂ ಪರವಾಗಿಲ್ಲ ಆದರೆ ಅದಕ್ಕೂ ಮುನ್ನ ಮೊದಲು Social Reform (ಸಾಮಾಜಿಕ ಸುಧಾರಣೆ) ಆಗಲೀ ಎಂದು ಹೇಳಿದರು. ಎಂದರೆ Social equality ಪಡೆಯಬೇಕು. ಆದರೆ ಆಗ ಎಲ್ಲರೂ ಅಂಬೇಡ್ಕರ 'ಸ್ವಾತಂತ್ರ್ಯ ವಿರೋಧಿ' ಎಂದು ಹೇಳಲಾರಂಭಿಸಿದರು. ಒಬ್ಬ ಬುದ್ಧಿವಂತನ ದೂರದೃಷ್ಟಿಯ ಬಗ್ಗೆ ಯಾರೂ ಯೋಚಿಸಲೇ ಇಲ್ಲ. ಆದರೆ ಅಂಬೇಡ್ಕರ್ ಏಕೆ ಈ ಮಾತು ಹೇಳಿದರು ಎಂದೂ ಎಲ್ಲರಿಗೂ ಮಾಡಬಹುದಾದ ಪ್ರಶ್ನೆ. ಅದಕ್ಕೆ ಉತ್ತರವಾಗಿ ಅಂಬೇಡ್ಕರ್ ಹೀಗೆ ಹೇಳಿದರು. ಸ್ವಾತಂತ್ರ್ಯ ಪಡೆಯುವ ಮುನ್ನ ಎಲ್ಲ ವರ್ಗದ ಜನತೆ ಒಬ್ಬರ ಆಳ್ವಿಕೆಯಲ್ಲಿದೆ. ಆದರೆ ಸ್ವಾತಂತ್ರ್ಯ ಬಂದನಂತರ ಕೆಳಜಾತಿಯವರು ಮೇಲ್ವರ್ಗದ ಜನತೆಯ ಗುಲಾಮರಾಗುತ್ತಾರೆ. ಆಗ ಸ್ವಾತಂತ್ರ್ಯ ಅರ್ಥಹೀನ ಎಂದು ಪ್ರತಿಪಾದಿಸಿದರು. ಇದು ಯುಗಯುಗಗಳಿಂದ ಆಗುತ್ತಲೇ ಬರುತ್ತಿದೆ. ಆದ್ದರಿಂದ Social equality ಪಡೆದ ನಂತರವೇ ಸ್ವಾತಂತ್ರ್ಯ ಪಡೆಯಬೇಕು. ಎಂದು ವಾದಿಸಿದರು. ಆದರೆ ಸ್ವಾತಂತ್ರ್ಯ ಬಂದ ನಂತರ ಸಂವಿಧಾನ ರಚಿಸುವ ಮುನ್ನ ದಲಿತರಿಗೆ ಸೂಕ್ತ ರಕ್ಷಣೆ ಮತ್ತು ಸರಿಯಾದ ನೆಲೆ ಕಂಡುಹಿಡಿಯುವ ಪ್ರಯತ್ನ ಮಾಡಿದರು. ಒಟ್ಟಾಗಿ ಗಮನಿಸಿದರೆ ಸಾಕಷ್ಟು ರಕ್ಷಣೆ ಇದೆ. ಆದರೆ ಅದನ್ನು ಇಲ್ಲಿಯವರೆಗೆ ನಾವು ಬಳಸಲು ಸೋತಿದ್ದೇವೆ. ಇಲ್ಲಿ 'ನಾವು' ಎಂದರೆ ಭಾರತ ದೇಶದ ಸಮಸ್ತ ಜನತೆ ಏಕೆಂದರೆ Constitution ಪೀಠಿಕೆ ಹೇಳುವಂತೆ "We the People of India" ಎಂದರೆ ಇದು ನಾವು ನೀಡುತ್ತಿರುವ ಸಂವಿಧಾನವಾಗಿದೆ. ಸ್ವಾತಂತ್ರ್ಯ ಪಡೆದ ನಂತರ ಮೊದಲ ಆದ್ಯತೆ ವಿಶ್ವಶಾಂತಿಗೆ ನೀಡಿದರು. ಕೆಳವರ್ಗದವರಿಗೆ ಸಾಮಾಜಿಕ ನ್ಯಾಯ ಬಂದಿಲ್ಲವೆಂದರೆ ಸ್ವಾತಂತ್ರ್ಯ ಬಂದಿಲ್ಲ ಎನ್ನುವುದೇ ಆಗುತ್ತದೆ. Political freedom ಬಂದಿರುವುದಂತೂ ಸುಳ್ಳಲ್ಲ. ಆದರೆ ಬದುಕುವ ನಿಟ್ಟಿನಲ್ಲಿ ಸಮಾನತೆ ಆಗಿರಲಿಲ್ಲ ಆದರೆ ಆಗಬೇಕು ಎನ್ನುವುದು ಆಶಯ. ಆಗ ನೆಹರೂಗೆ ವಿಶ್ವನಾಯಕತ್ವದ ಹಂಬಲ ಬಹಳವಿತ್ತು. ಆದ್ದರಿಂದ ವಿಶ್ವಶಾಂತಿಗೆ ಆದ್ಯತೆ ನೀಡಲಾಗಿತ್ತು. ಅಂಬೇಡ್ಕರ್ ಅವರಂತೆ ದೇಶದ ರಾಜಕೀಯ, ಸಾಂಸ್ಕೃತಿಕ ಸಾಮಾಜಿಕ ವಾಸ್ತವದ ಮೇಲೆ ಪ್ರಭಾವ ಬೀರುವಂತೆ ಯಾರೂ ಬೀರಲಿಲ್ಲ ಎನ್ನುವುದು ಸತ್ಯ. ಎಷ್ಟೇ ಎಳೆತಗಳಿದ್ದರೂ ದಲಿತರಿಗೆ ತಮ್ಮ ಕಾಳಜಿ ಕಡಿಮೆ ಆಗಲಿಲ್ಲ. ಚುನಾವಣೆಯಲ್ಲಿಯೂ ಅವರನ್ನು ಸೋಲಿಸಿ, ದಲಿತರ ಬೆಂಬಲಿಗರೂ ಇಲ್ಲದಂತೆ ಮಾಡಿದರು. ತದನಂತರದಲ್ಲಿ ಕಾಂಗ್ರೆಸ್ ಪಕ್ಷದಲ್ಲಿದ್ದ ದಲಿತರು ಕಾಂಗ್ರೆಸ್ ರಾಜಕೀಯಕ್ಕೆ ಹೊಂದಿಕೊಂಡರು. ತಾತ್ವಿಕವಾದ ಹೋರಾಟದ ನೆಲೆಗೆ ಹೋಗಲಿಲ್ಲ.

ಇಷ್ಟೂ ವರ್ಷಗಳಲ್ಲಿ ಲೋಕಸಭೆಗೆ ಆಯ್ಕೆಯಾಗಿ ಹೋಗುತ್ತಿರುವ ಹಿಂದುಳಿದ ವರ್ಗದವರು, ದಲಿತರೂ ಎಂದಿಗೂ ಕೂಡ ಅಂಬೇಡ್ಕರ್ ಅವರು ನಡೆಸಿದ ಹೋರಾಟದ ಕಾಲುಭಾಗದಷ್ಟಾದರೂ ಹೋರಾಟ ನಡೆಸಲಿಲ್ಲ. ಏಕೆಂದರೆ ಕುರ್ಚಿ ಕುಸಿಯಬಹುದೆಂಬ ಭಯದಿಂದ. High commandಗೆ ಸಲಾಮು ಹಾಕತೊಡಗಿದರು. ಈ ರೀತಿ Congress ಸಂಸ್ಕೃತಿಗೆ ದಲಿತರು ಹೊಂದಿಕೊಳ್ಳುತ್ತಾ ಸಂವಿಧಾನದ ಆಶಯಕ್ಕೆ ಯಾವುದೇ ಬೆಲೆ ನೀಡಲಿಲ್ಲ ಎನ್ನುವುದು ವಿಪರ್ಯಾಸ. ಇದು ಆರೋಪವಲ್ಲ. ಚರಿತ್ರೆಯನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನ ಮಾಡುತ್ತಿದ್ದೇನೆ. ಆದ್ದರಿಂದ ಅಂಬೇಡ್ಕರ ಅವರ ನಂತರದಲ್ಲಿ ಬಂದ ದಲಿತ ನಾಯಕರು ನಿಷ್ಠೆಯಿಂದ, ಸಂಕಲ್ಪ ಬಲದಿಂದ ಈಡೇರಬೇಕೆಂದು ದುಡಿಯಲಿಲ್ಲ. ಇದು ನನ್ನ ಮೊದಲ ಅಭಿಪ್ರಾಯ.

ದಲಿತರು ಮುಂದಾಗದಿರಲು ಕಾರಣವೇನು ? ಕುರ್ಚಿ ಕಳೆದುಕೊಳ್ಳುವೆನೆಂಬ ಭಯ. ಈ

ಸಮಸ್ಯೆಗಳು ಹಾಗೇ ಉಳಿವಷ್ಟು ದಲಿತ ನಾಯಕರಿಗೆ ಸುಲಭವಾಗಿರುತ್ತದೆ. ಯಾವೊಬ್ಬ ದಲಿತನೂ ಕೂಡ high command ವಿರುದ್ಧ ಮಾತನಾಡುವ ಬುದ್ಧಿ ಇಷ್ಟು ವರ್ಷಗಳಲ್ಲಿ ತೋರಿಸಲಿಲ್ಲ. ಎಲ್ಲರೂ ಸ್ಪಷ್ಟವಾಗಿ ಗ್ರಹಿಸಿರಿ. ನಾನು ಗೊಂದಲ ಮಾಡಿಕೊಂಡರೆ ನೀವು ಮಾಡಿಕೊಳ್ಳದಿರಿ. ಯಾವುದೇ ಪಕ್ಷದಲ್ಲಿ ಕೆಲಸಮಾಡಿದರೂ ದಲಿತರು ಹೀಗೆ ಹೇಳಬೇಕು. ಪಕ್ಷದ ಏನೇ ಸಿದ್ಧಾಂತವಿದ್ದರೂ ಅದು ನಮಗೆ (ದಲಿತರಿಗೆ) Secondary. ಅದು ನಮಗೆ ದ್ವಿತೀಯ ಆಯ್ಕೆ. ದಲಿತರ ಏಳ್ಗೆಗೆ ನಾವು ಬದ್ಧರಾಗಿದ್ದೇವೆ. ಮೊದಲ ಆಯ್ಕೆ ದಲಿತ ಹಿತ' ಹೀಗೆ ಹೇಳುವ ಯಾವ ರಾಜಕಾರಣಿಯನ್ನು ಇನ್ನೂ ಕಾಣದಿರುವುದು ನಿಜವಾಗಿಯೂ ವಿಷಾದಕರ. ಜನಸಾಮಾನ್ಯ ಅವಿದ್ಯಾವಂತ ದಲಿತರನ್ನು ತುಳಿದು ತುಳಿದು ಕೆಟ್ಟ ಚರಿತ್ರೆ, ದುಷ್ಟ ಚರಿತ್ರೆಯನ್ನಾಗಿಸಿ ಎಲ್ಲ ಸಂವೇದನೆಗಳನ್ನು ಕಳೆದುಕೊಳ್ಳುವಂತೆ ಮಾಡಲಾಗಿದೆ. ಇನ್ನು ವಿದ್ಯಾವಂತ ದಲಿತರು Vice Chancellor, Professorಗಳಾಗುತ್ತಿದ್ದಾರೆ. ಈ ರೀತಿಯ ಹುದ್ದೆ ಅಲಂಕರಿಸುವುದು ತಪ್ಪಲ್ಲ. ಆದರೆ ಅವರೂ ರಾಜಕಾರಣಿಗಳೊಂದಿಗೆ ಸಂಬಂಧ ಬೆಳೆಸುತ್ತ ಸಾಮಾನ್ಯರ ಬಗ್ಗೆ ಯೋಚಿಸುತ್ತಿಲ್ಲ. ಈ ರಾಜಕಾರಣಿಗಳು ಇವರಂತಹವರನ್ನು ಸಮಾಧಾನ ಪಡಿಸುವಂತಹ ಕೆಲಸಗಳೇ ನಡೆಯುತ್ತಿವೆ. ಬೇರೆಯವರೂ ತಪ್ಪು ಮಾಡಿದ್ದಾರೆ ಎಂಬ ಆರೋಪವೇ ತಪ್ಪಾಗುತ್ತದೆ. ದಲಿತ ಹೋರಾಟಗಾರರು, ದಲಿತ ಚಳುವಳಿಗಳು, ದಲಿತ ನಾಯಕರು ಅಗತ್ಯವಾದ ದಿಟ್ಟ ನಿಲುವುಗಳನ್ನು ತಾಳಬೇಕು ಸ್ವಾತಂತ್ರ್ಯದ ನಂತರದಲ್ಲಿ ಸಮಾನತಾ ಹೋರಾಟ ಆಗಬೇಕು ಸಮಾನತಾ ಹೋರಾಟ ನಿಜವಾದ ಅರ್ಥದಲ್ಲಿ ಸ್ವಾತಂತ್ರ್ಯ ಹೋರಾಟ ಆಗಬೇಕಿತ್ತು. ಮೇಲಧಿಕಾರಿಗಳಿಗೆ ಏನೂ ಅನ್ವಯಿಸುವುದಿಲ್ಲ. ತಾತ್ವಿಕವಾಗಿ ಭಾವನಾತ್ಮಕವಾಗಿ ಆಲೋಚಿಸುವವರಿಗೆ ಮಾತ್ರ ಇದು ಅರ್ಥವಾಗುತ್ತದೆ. ಆ ತಹತಹ ಇರುವಂತವರು ಹೋರಾ ಟನಡೆಸುವ ಸಂಕಲ್ಪವನ್ನು ಮಾಡಬೇಕು. ಸಂವಿಧಾನದಲ್ಲಿ ನಮಗೆ ಏನು ಪ್ರತಿಶತವಿದೆಯೋ ಅದನ್ನು ನೀಡಿರಿ ಎಂದು ಆಗ್ರಹಿಸಿ. ಯಾರೂ ನಮಗೆ ಏನನ್ನೂ ಮಾಡಲಾಗದು. ಶಕ್ತಿ ಇದ್ದು, ಬಲವಿದ್ದೂ, ಮತ್ತು ಪ್ರಜಾಸಕ್ತಿಯಲ್ಲಿ ಸಾಧ್ಯತೆ ಇದ್ದೂ ಕೂಡ ಅದನ್ನು ಎಚ್ಚರದಿಂದ ಬಳಸುವಂತಹ ನೇತಾರರು ದಲಿತರಿಗೆ ಅಂಬೇಡ್ಕರ ನಂತರ ಯಾರೂ ಸಿಗಲೇ ಇಲ್ಲ. ಇದು ದೊಡ್ಡ ಕೊರತೆ ಆಗಿದೆ. ಇದೀಗ ಇದೇ ಒಂದು ಕಾರ್ಯಕ್ರಮವಾಗಿತ್ತು. ನೆಹರೂ ಅವರಿಗೆ ವಿಶ್ವಶಾಂತಿ ಪ್ರಥಮ ಆಯ್ಕೆ ಆಗಿತ್ತು. ಇನ್ನೂ ಲಾಲ್‌ಬಹದ್ದೂರು ಶಾಸ್ತ್ರಿಗಳು 'ಜೈಜವಾನ್ ಜೈಕಿಸಾನ್' ಎಂದು ಘೋಷಿಸಿದರು. ಏಕೆಂದರೆ ಆಗ ಚೀನಾ ವಿರುದ್ಧ ಯುದ್ಧ ನಡೆಯುತ್ತಿತ್ತು. ಆದ್ದರಿಂದ ಜೈ ಜವಾನ್' ಎಂದರು. ಆದರೆ ಜೈ ದಲಿತ್ ಬರಲಿಲ್ಲ. ಇಂದಿರಾಗಾಂಧಿ ಬಂದ ನಂತರ 'ಗರೀಬೀ ಹಠಾವೊ' ಘೋಷಣೆ ಆಯಿತು. ಅಲ್ಲಿಯೂ ದಲಿತರ ಪ್ರಶ್ನೆ ಬರಲೇ ಇಲ್ಲ. ರಾಜೀವ್‌ಗಾಂಧಿಯವರೂ ಕೂಡ ಯಾವುದೇ ದಲಿತ ಪರ ಕಾರ್ಯಕ್ರಮ ಹಮ್ಮಿಕೊಳ್ಳಲಿಲ್ಲ. ಮಂಡಲ್ ವರದಿ, ವೈದ್ಯರ ಚಳುವಳಿ, ಗುಜರಾತ್ ಚಳುವಳಿಗಳು ಯಾವುದೇ ಪರಿಣಾಮ ಬೀರಲಿಲ್ಲ. ಹಿಂದೆಲ್ಲಾ ಗಲಾಟೆಗಳಾದಾಗ ರಾಜಕೀಯ ಪಕ್ಷಗಳು ಮೀಸಲಾತಿಯ ಪರವಾಗಿ ಒಮ್ಮತದ ಅಭಿಪ್ರಾಯಕ್ಕೆ ಬರಬಹುದಿತ್ತು. ಹೇಗೆ ಈಗ ವೈದ್ಯರ ಪರವಾಗಿ ಒಮ್ಮತದ ಅಭಿಪ್ರಾಯಕ್ಕೆ ಅಂತೆಯೇ ದಲಿತರ ಪರವಾಗಿ ಅಭಿಪ್ರಾಯ ಬರಬೇಕಿತ್ತು. ಒಬ್ಬರು ಪಡೆದುಕೊಳ್ಳಲು ಆರಂಭಿಸಿದರೆ ದಲಿತರು ಬಿಟ್ಟುಕೊಡಲು ಸಿದ್ಧವಾದರು. ಸಮಾಜಕ್ಕೆ ಒಳಿತಾಗಬೇಕು ಎಂದು ಆಲೋಚಿಸುವ ಸಮಾಜಪರ ಕಾಳಜಿ ಇರುವವರ ಸಂಖ್ಯೆ ತೀರ ಕಡಿಮೆ ಇತ್ತು. ಆಗ ಬೇರೆಯವರು ತಾತ್ಸಾರದಿಂದ ಇಂತಹವರನ್ನು ನೋಡಲು ಮುಂದಾದರು. ಅತಿಯಾಸೆ ಪಡಲು ಆರಂಭಿಸಿದರು.

ಅಸೂಯೆ ಮತ್ತು ಅತಿಯಾಸೆ ಸಮಾಜದೊಳಕ್ಕೆ ಬಂದು ಆಳ್ವಿಕೆ ನಡೆಸಿದರೆ ಸಂಘರ್ಷ

ಆಗುವುದು ಖಂಡಿತ ಅಲ್ಲವೆ? ಸಂವಿಧಾನದಿಂದ ಸುಧಾರಣೆ ಆಗದಿದ್ದರೆ ರಾಷ್ಟ್ರಪತಿಗೆ ಅದನ್ನು ಬದಲಾಯಿಸುವ ಹಕ್ಕು ಇದೆ. ಆದರೆ ಇದೀಗಾಗಲೇ ಐದೂವರೆ ದಶಕಗಳು ಕಳೆದರೂ ಏನೂ ಮಾಡಿಲ್ಲ. ಏಕೆಂದರೆ ಇವುಗಳಿಗೆ ಪ್ರಥಮ ಆದ್ಯತೆ ನೀಡಲಾಗಿಲ್ಲ. ದಲಿತರೂ ಕೂಡ ಇದಕ್ಕೆ ಪ್ರಥಮ ಆದ್ಯತೆ ನೀಡಲಿಲ್ಲ. ಆಗ ಜನಸಂಘಗಳು ಬೆಳೆಯುತ್ತಾ ಬಂದವು. ದಲಿತ ನಾಯಕರು ಗಟ್ಟಿ ನಿಲುವು ತೆಗೆದುಕೊಳ್ಳದೇ ಇರುವುದು ಮತ್ತು ಹಾಗೆ ನಿಲುವು ತಳೆದವರನ್ನು ಚ್ಯುತಿಗೊಳಿಸುವುದೇ ಪ್ರಮುಖ ಕಾರಣವಾಗಿ ಕಂಡುಬರುತ್ತದೆ. ಅಂಬೇಡ್ಕರ್ ಅವರು ಆರಂಭದಿಂದಲೂ ಹಿಂದು ಧರ್ಮವನ್ನು ವಾಚಾಮಗೋಚರನಾಗಿ ಖಂಡಿಸುತ್ತಾ ಬಂದರು. ಈಗ ಖಂಡಿಸಿದರೆ ಬೆದರಿಸುವ ಪ್ರಸಂಗಗಳು ಜರುಗುತ್ತವೆ. ಯಾವುದನ್ನು ಅಂಬೇಡ್ಕರ್ ಖಂಡಿಸುತ್ತಾ ಬಂದರೋ ಅದು ಪ್ರತಿದಿನ ಬಲವಾಗುತ್ತ ಬಂದಿತು. ಆಗ ಎಲ್ಲಾ ಜಾತಿಯವರು ಎಚ್ಚರಗೊಳ್ಳುತ್ತಾ ಬಂದರು. ಯಾವುದು ಮಾರಕವಾಗಿತ್ತು ಅದು ಈಗ ಅತ್ಯಂತ ಪ್ರಬಲವಾಗುತ್ತಿದೆ. ದಲಿತ ನಾಯಕರೂ ಕೂಡ ಕುರ್ಚಿಗಾಗಿ ಸಿದ್ಧಾಂತಗಳನ್ನು ಬಿಟ್ಟರು. ಕುರ್ಚಿರೋಗ ದಲಿತ ನಾಯಕರಿಗೂ ಬಂದಿತು. ಈಗಲೂ ಅಸಮಾನತೆ ಇದ್ದೇ ಇದೆ. ಸ್ವಾತಂತ್ರ್ಯ ಎನ್ನುವುದು ಸಮಾನತೆ ಇಲ್ಲದೆ ಇಲ್ಲ. ಈಗಲಾದರೂ Parliament ಸದಸ್ಯರು ಎಚ್ಚೆತ್ತುಕೊಂಡು 10–15 ವರ್ಷಗಳೊಳಗೆ ಸಮಸ್ಯೆ ಬಗೆಹರಿಯದಿದ್ದರೆ ರಾಜಿನಾಮೆ ನೀಡುವುದಾಗಿ ಹೆದರಿಸಬೇಕು. ಅಸಹಕಾರ ತೋರಿದರೆ ಮಾತ್ರ ಪರಿಹಾರ ದೊರಕುತ್ತದೆ. ದಲಿತರಿಗೆ Reservation ಬೇಡ ಎನ್ನುವವರಲ್ಲಿ ಮಧ್ಯಮ ಜಾತಿಯವರೂ ಇದ್ದಾರೆ. ಮುಂದೆ ಅವರಿಗೂ ಬೇಡ ಎಂದಾಗ ಕಷ್ಟಗಳು ಗೊತ್ತಾಗುತ್ತದೆ.

ಖಾಸಗಿಯಲ್ಲೂ ಕೂಡ Reservation ಅಗತ್ಯ ಇದೆ. ಈ ಹೋರಾಟ ಸಮಾನತೆಯ ಹೋರಾಟವಾಗಿ ರೂಪುಗೊಂಡರೆ ಆಗ ಎಲ್ಲರೂ ಇದರ ಜೊತೆ ಬರಲೇ ಬೇಕಾಗುತ್ತದೆ. ಆದ್ದರಿಂದ ಎಲ್ಲರೂ ಕೂಡಿ ಒಟ್ಟಾಗಿ ಹೋರಾಡಿ, ಈ ಹೋರಾಟದ ಬಗೆಗಿನ ಕಲ್ಪನೆಗಳನ್ನು ರೂಪಿಸಿಕೊಂಡು ನಿಲ್ಲಬೇಕು. ಇದನ್ನು ಮಾಡಲು ಸಂಕಲ್ಪಬೇಕು, Ledarship ಬೇಕು. ಕೊರತೆ ಇರುವುದೇ leadershipನಲ್ಲಿ ಒಂದು ದೊಡ್ಡ ಪ್ರಮಾಣದ ಅಸಹಕಾರ ಚಳುವಳಿ ಮಾಡಿದರೆ ಮಾತ್ರ ಸಾಧ್ಯ. ಈಗಲಾದರೂ ಯೋಚಿಸಲು ಆರಂಭಿಸಿದರೆ ಮುಂದೆ ಪರಿಹಾರ ಖಂಡಿತವಾಗಿ ಸಿಗುತ್ತದೆ. ಬೇರೆಯವರನ್ನೂ ದೂಷಿಸುವ ಮುನ್ನ ನಮ್ಮದೂ ಪಾಲಿದೆ ಎಂದು ಅರಿಯಬೇಕು. ಇಲ್ಲದಿದ್ದರೆ 15 ವರ್ಷಗಳಲ್ಲಿ Civil war ಆಗುತ್ತದೆ. ಅಂತಹ ಸ್ಥಿತಿ ಬಾರದೆ ಪ್ರಜಾಸತ್ತಾತ್ಮಕ ಅಸಹಕಾರದ ನೆಲೆಯಲ್ಲಿ ಅಹಿಂಸಾಕರವಾದ ರೀತಿಯಲ್ಲಿ ಚರ್ಚೆ ಅಥವಾ ಚಿಂತನೆ ಮಾಡಬೇಕು. ಸಂವಿಧಾನ ಎಷ್ಟೇ ಉತ್ತಮವಾಗಿದ್ದರೂ ಅದನ್ನು ನಡೆಸಿಕೊಂಡು ಹೋದವರು ಕೆಟ್ಟವರಿದ್ದರೆ ಸಂವಿಧಾನವು ಕೆಟ್ಟದಾಗೇ ಆಗುತ್ತದೆ' ಎಂದು ಅಂಬೇಡ್ಕರ್ ಹೇಳಿದರು.

*ಸಂವಾದದ ಮಾತು*– "In Addition to our old enemies in the form of Caste & Creeds. we are going to have many political parties with diverse & opposing Political creeds" ಇಲ್ನೋಡಿ Next "will Indians place the country above their Creed or will they place creed above country?" ತಮ್ಮ ಸಿದ್ಧಾಂತವನ್ನು ದೇಶಕ್ಕಿಂತ ದೊಡ್ಡದು ಅಂತ ಮಾಡ್ತಾರೋ, ದೇಶ ಇದ್ಕಕಿಂತ ದೊಡ್ಡದು. ಅಂತ ತಿಳೀತಾರೋ ನನಗೆ ಗೊತ್ತಿಲ್ಲ, ಇದೇನಾಗ್ತಾ ಇದೆ ಅಂತ ನೋಡಿ. "I do not know, but this much is certain that if the party placd creed above country" ಇದು ಮಾತ್ರ ನಿಶ್ಚಿತ ಏನೆಂದರೆ ರಾಜಕೀಯ ಪಕ್ಷಗಳು ತಮ್ಮ ಸಿದ್ಧಾಂತವನ್ನು ದೇಶಕ್ಕಿಂತ ಮೇಲೆ

ಇಟ್ಟಿದ್ದಾದರೆ "Our independance will be put in jeopardy a seond time" ಈ ದೇಶದ ಸ್ವಾತಂತ್ರ್ಯ ಇನ್ನೊಮ್ಮೆ ಆಘಾತಕ್ಕೆ ಒಳಗಾಗ್ತದೆ, "and probably be lost for-ever" ಆ ಸ್ವಾತಂತ್ರ್ಯವನ್ನು ನಾವು ಕಳೆದುಕೊಳ್ಳುವ.... Permanent ಆಗಿ ಶಾಶ್ವತವಾಗಿ ಕಳೆದುಕೊಳ್ಳಬಹುದು... "This eventuality, We must resolutely guard against", ಈ ರೀತಿಯ ಒಂದು ಆಘಾತ ಬರುವಂಥದ್ದನ್ನು ನಾವು 'Resolutely', ಸಂಕಲ್ಪ ಬಲದಿಂದ ರಕ್ಷಿಸಬೇಕಾಗಿದೆ. "...we must be determined to defend our independance with the last drop of our blood" ಈ ನಮ್ಮ ಸ್ವಾತಂತ್ರ್ಯವನ್ನು ನಮ್ಮ ಕೊನೆಯ ಹನಿ ರಕ್ತ ಇರುವವರೆಗೆ ಕಾಪಾಡಿಕೊಳ್ಳವುದಕ್ಕೆ ಸಂಕಲ್ಪ ಬಲವನ್ನು ತೋರಿಸಬೇಕಾಗಿದೆ. ಇದನ್ನ ಹೇಳಿದ್ದುಯಾವಾಗ ಅಂದ್ರೆ, ಅದನ್ನ ಅಂಗೀಕರಿಸಿದ ಹೊತ್ತಿನಲ್ಲಿ, ಆ ಹೊತ್ತಿನಲ್ಲೇ ಮಾಡಿದ ಭಾಷಣದಲ್ಲಿ ಹೇಳಿರೋದು, ನಿಮ್ಮ ಗಮನಕ್ಕೆ ತರ್ತಿದ್ದೇನೆ. ಇಷ್ಟೊತ್ತು ನಾನು ಮಾತಾಡಿದರೆ ಹಿನ್ನೆಲೆಯಲ್ಲಿ ಅಂಬೇಡ್ಕರರ ಚಿಂತನೆಯ ಆಶಯ ಇದೆ. ನಮ್ಮ ಸಂವಿಧಾನದ ಆಶಯ ಇದೆ. ನಾನದನ್ನ ಹೇಳೋ ಹೊತ್ತಿನಲ್ಲಿ ಎಷ್ಟು ಸಮರ್ಪಕವಾಗಿ, ಎಷ್ಟು ಸ್ಪಷ್ಟವಾಗಿ ಹೇಳೋಕೆ ಸಾಧ್ಯವಾಯ್ತೋ ಇಲ್ಲವೋ ಅದು ನನ್ನ ಮಿತಿ ಆದರೆ ಇದರ ಹಿಂದಗಡೆ ಇರೋ, ಆಶಯ ಇದು– ಅಂತ ಹೇಳೋದಕ್ಕೆ ಇಷ್ಟಪಡ್ತೀನಿ.

# ಸ್ವತಂತ್ರ ಭಾರತದಲ್ಲಿನ ರಾಜಕೀಯ ಸಂರಚನೆಗಳು

*ಡಾ. ಮುಜಾಫ್ಫರ್ ಅಸಾದಿ*

ಬಹುಶಃ ಪ್ರೊ॥ ಜಿ. ಎಚ್. ನಾಯಕರು ಹೇಳಿಬಿಟ್ಟಿದ್ದಾರೆ. ಮೂಲತಃವಾಗಿ Congressನ Politicsಅನ್ನು. ಹಿಂದುತ್ವದ Politics ಅನ್ನು. ಇವೆರಡು ಬಹಳ ಮುಖ್ಯವಾದ ವಿಷಯಗಳು ಆದರೆ ನಾನು ಇಲ್ಲಿ ಪ್ರಸ್ತಾಪಿಸಿದ ಕೆಲವು ಬೇರೆ ವಿಚಾರಗಳ ಬಗ್ಗೆ ಕೂಡ ಹೌದು ಅಂತ ಹೇಳ್ತೇನೆ ನಾನು ಮೂಲತಃವಾಗಿರುವಂಥದ್ದು, ಕೆಲವು ವಿಷಯಗಳು, ಇವತ್ತು ನಮ್ಮ ದೈನಂದಿಕ ಸಂವಾದಗಳಲ್ಲಿ, discussionಗಳಲ್ಲಿ ಹೇಗೆ ಮರೆಮಾಚಿ ಬಿಡ್ತದೆ, ಅದು ಒಂದು. ಅದಕ್ಕೆ ಆ ಸಂವಾದಗಳು ಬಹಳ ಮುಖ್ಯವಾಗಿ ಬಿಡ್ತದೆ. ಮಾತ್ರವಲ್ಲದೆ ಆ ಸಂವಾದಗಳು ಇವತ್ತು ಅನಿವಾರ್ಯವೇ. ಇವತ್ತು ಸಮುದಾಯಗಳು ಏನನ್ನು ಮಾತನಾಡ್ತಾ ಇವೆ. ಅವುಗಳನ್ನು ಬರೇ ತಮ್ಮ ಸಂವಾದಗಳಿಗೇ ಸೀಮಿತಗೊಳಿಸಬೇಕೆ ? ಚಾರಿತ್ರಿಕ ಹಿನ್ನೆಲೆಯಿಂದ ಬಂದಂತಹ ಒಂದು ಸಮುದಾಯಗಳಿಗೆ ಮಾತ್ರ ಸೀಮಿತಗೊಳಿಸಬೇಕೆ ? ಒಂದು ಧಾರ್ಮಿಕ ಚೌಕಟ್ಟಿನಲ್ಲಿರುವಂತಹ ಸಮುದಾಯಗಳಿಗೆ ಸೀಮಿತಗೊಳಸಬೇಕೆ ? ಅಥವಾ ಇಲ್ಲವೇ ? ಇದನ್ನು ನಾನು ವಿಸ್ಮೃತಿ (Amnesia) ಎನ್ನುತ್ತೇನೆ. ನಮ್ಮಲ್ಲಿ ಸಾಕಷ್ಟು ಚಿಂತಕರಲ್ಲಿ ಈ ವಿಸ್ಮೃತಿ ಇದೆ. ಒಂದು ವಿಸ್ಮೃತಿ ಏನೆಂದರೆ, ದಲಿತ ಪ್ರಶ್ನೆಯೆಂಬುದು ಬರೀ ಹಿಂದು ಸಮಾಜಕ್ಕೆ ಮಾತ್ರ ಸೀಮಿತಗೊಳಿಸಬೇಕೆ ? ಅಥವಾ ಸೀಮಿತಗೊಳಿಸಲಾಗಿದೆ. ನಾನ್ಯಾಕೆ ಹೇಳ್ತಿದ್ದೇನೆ ಅಂದ್ರೆ, ಇವತ್ತು ಒಂದು ಪ್ರಬಲವಾದಂತಹ ಸಂವಾದ ಬೆಳೆದಿದೆ, ಭಾರತದ ಸಂದರ್ಭದಲ್ಲಿ ಈವತ್ತು ದಲಿತ ಪ್ರಶ್ನೆಯೆಂಬುದು ಬರೇ ಹಿಂದೂ ಸಮಾಜಕ್ಕೆ ಮಾತ್ರ ಸೀಮಿತಗೊಳಿಸಬಾರದು. ದಲಿತನ ವ್ಯಾಖ್ಯಾನದಿಂದ ನೀವು ಶುರು ಮಾಡಿದರೆ, ದಲಿತ ಎಂದರೆ 'ಬಲ ಪ್ರಯೋಗದಿಂದ ತುಳಿಯಲ್ಪಟ್ಟ ಶೋಷಿಸಲ್ಪಟ್ಟ ಅಥವಾ ಕೆಳ ಸ್ಥರದಲ್ಲಿರುವಂತಹ ವ್ಯಕ್ತಿ' ಎಂದು ನೀವು ತಿಳಿದುಕೊಂಡು ಬಿಟ್ಟರೇ, ಬಹುಶಃ ದಲಿತ ಎಂಬ ಶಬ್ದ 'ದಲ' ಎಂಬ ಶಬ್ದದಿಂದ ಬಂದಿರಬೇಕು. ಅದಕ್ಕೆ Constitutional framework ಕೊಟ್ಟಿದ್ದು Scheaduled Caste ಅಂತ ಹೇಳಿ. Discriminationಗಾಗಿ ನಾವು ಒಂದು Identityಗಳನ್ನು ಕೊಟ್ಟು, ಅವುಗಳಿಗೆ Scheaduled Caste ಅಂತ ಕರೆದೆವು. ಇಲ್ಲಿ ಒಂದು ಪ್ರಶ್ನೆ ಏನೂ ಅಂದ್ರೆ, ದಲಿತ ಎಂಬ ಶಬ್ದವನ್ನು ಅರ್ಥೈಸ್ತಾ ಹೋದರೆ ಬರೀ ಹಿಂದು ಸಮಾಜದಲ್ಲಿ ಮಾತ್ರ ಸಿಗೋಕೆ ಸಾಧ್ಯವಿಲ್ಲ, ಅದು ಒಂದು ಪ್ರಶ್ನೆಯಾದರೆ ಎರಡನೆಯ ಪ್ರಶ್ನೆ ಇವತ್ತು ಕ್ರಿಶ್ಚಿಯನ್ ಸಮಾಜದಲ್ಲಿರುವ ದಲಿತರು, ಹಿಂದು ಸಮಾಜದಿಂದ Convert ಆಗಿರುವಂತಹ ದಲಿತರು, ಅವರ ಪ್ರಶ್ನೆಗಳನ್ನು ಕೂಡಾ ನಾವ್ಯಾಕೆ ತೆಗೆದುಕೊಳ್ಳುತ್ತಿಲ್ಲ. ಇವತ್ತು ಉತ್ತರ ಭಾರತದಲ್ಲಿ ಮತ್ತೊಂದು ಸಂವಾದ ಮತ್ತೊಂದು ಚರ್ಚೆ ನಡಿಯುತ್ತಿದೆ. ಮುಸ್ಲಿಂರಲ್ಲಿರುವಂತಹ ದಲಿತರ ಪ್ರಶ್ನೆಯನ್ನು ಯಾಕೆ ಪರಿಗಣಿಸುತ್ತಿಲ್ಲ ? ಮಂಡಲ್ ಕಮಿಶನ್ ಅಥವಾ ಅದರ ನಂತರ ಬಂದಿರುವಂತಹ ಹಾವನೂರು ಕಮಿಷನ್ ಈ ಪ್ರಶ್ನೆಗಳನ್ನು ಎತ್ತಿದವು. Reservationsಗಳ ಬಗ್ಗೆ ಬಂದಾಗ ಮುಂದೆ ಬೇರೆ ಕಮಿಷನ್ ಕೂಡಾ ಮಾತನಾಡಿತು. ಮಂಡಲ್ ಕಮಿಷನ್‌ನ Report ಮೂಲತಃವಾಗಿ ಹಾವನೂರು ಕಮಿಷನ್ Reportನ ಮೇಲೆ ಅವಲಂಬಿತವಾದಂತಹ Report. ಅದು ಎತ್ತಿದ ಪ್ರಶ್ನೆ ಮುಸ್ಲಿಮರಲ್ಲಿ ಕೂಡಾ ಸಾಮಾಜಿಕವಾಗಿ ಹಿಂದುಳಿದವರಿದ್ದಾರೆ. ಆ ಹಿಂದುಳಿದವರು ಯಾರು?' ಎಂದು. ಒಂದು ಮಾತಂತು ಸತ್ಯ, ಭಾರತದ ಸಂದರ್ಭದಲ್ಲಿ

ಭಾರತದಲ್ಲಿರುವಂತಹ ಶೇ. 90ರಷ್ಟು ಮುಸ್ಲಿಮರು ಭಾರತೀಯರು. ಅವರೆಲ್ಲರೂ ಕೂಡ Local convertsಗಳು. ಈ ಸತ್ಯ, ಎಲ್ಲರೂ ಒಪ್ಪಿಕೊಳ್ಳಲೇ ಬೇಕಾದಂತಹುದು, ಭಾರತದ ಸಂದರ್ಭದಲ್ಲಿ ಬಂದ ಇಸ್ಲಾಂ, ಮೂರು ರೂಪದಲ್ಲಿ ಬಂತು.

1. ಸೂಫಿಗಳ ರೂಪದಲ್ಲಿ ಬಂತು ಕೇರಳದಿಂದ ರಾಜಾಶ್ರಯದ ಮೂಲಕ ಬಂತು.

2. ಸೈನಿಕರ ರೂಪದಲ್ಲಿ, ಅಧಿಕಾರಿಗಳ ರೂಪದಲ್ಲಿ ಬಂತು Conquererಗಳ ರೂಪದಲ್ಲಿ ಬಂತು.

3. Local ರೂಪದಲ್ಲಿ ಬಂತು. ಇದರಲ್ಲಿ 90 ಶೇಕಡದಷ್ಟು ಜನಸಂಖ್ಯೆ (Population) ಅವರೆಲ್ಲರೂ ಕೂಡ Local converts ನೀವು ಬಹುಶಃ ಸತೀಶ್ ಕುಮಾರರ ಪುಸ್ತಕಗಳನ್ನು ಓದಿದರೆ ನಿಮಗೆ ಅರ್ಥ ಆಗುತ್ತದೆ. ಮಧ್ಯಕಾಲೀನ ಭಾರತದಲ್ಲಿ ಯಾಕೆ ಸಾಕಷ್ಟು ಜನ Convert ಆದರು, ಮತಾಂತರಗೊಂಡರು ? ಅವರಲ್ಲಿ ಕೆಳವರ್ಗದವರೆಷ್ಟು ? ಅದರಲ್ಲಿ ಸಾಕಷ್ಟು ಜನ ಹಿಂದುಳಿದವರಿದ್ದರು. ಅದು Political reasonಗಳಿಗಾಗಿ ಕೂಡಾ ಇರಬಹುದು. ಅದಕ್ಕಿಂತಲೂ ಬಹಳ ಮುಖ್ಯವಾದಂಥದ್ದು. ಒಂದು ಸಮಾಜದಿಂದ ತಿರಸ್ಕೃತಗೊಂಡಂತಹ ವರಿಗೆ ಒಂದು Identity ಬೇಕಿತ್ತು. ಸಮಾನತೆ ಬೇಕಿತ್ತು. ಬಹುಶಃ ಅದಕ್ಕೇ ಇಸ್ಲಾಂ ಧರ್ಮ ಅವಕಾಶ ಮಾಡಿಕೊಟ್ಟಿತ್ತು. ಉದಾಹರಣೆಗೆ ಚರ್ಚ್ ಮಾಡಿರುವಂತಹ ಮತಾಂತರಗಳು. ಚರ್ಚ್ ಮೊಟ್ಟಮೊದಲನೆಯದಾಗಿ ಹಳ್ಳಿಯ ಹೊರಗಡೆ ಚರ್ಚನ್ನು ಸ್ಥಾಪಿಸುತ್ತದೆ. ಆಮೇಲೆ ಮೆಲ್ಲ ಮೆಲ್ಲನೆ ಹೋಗುವುದು ದಲಿತ ಕೇರಿಗಳಿಗೆ. ಇವತ್ತೂ ಕೂಡ ಅದರ Agendaಗಳಿವೆ Bushನ agendaಗಳಿಗೂ ಚರ್ಚಿನ agendaಗಳಿಗೂ ಏನೂ ವ್ಯತ್ಯಾಸ ಇಲ್ಲ. [ಇವತ್ತಿನ websiteಗಳಲ್ಲಿ ಸಿಗುತ್ತಿರುವುದು,] actually ಮುಖ್ಯವಾಗಿ ಮತಾಂತರಗೊಳಿಸುವಂತಹ ಯತ್ನಗಳು ಬಹಳ ಇವೆ. ಅದು ಇರಲಿ ಅದು ಪ್ರಶ್ನೆಯಲ್ಲ. ಪ್ರಶ್ನೆ ಇಷ್ಟೆ. ಕ್ರಿಶ್ಚಿಯನ್ ಧರ್ಮಕ್ಕೆ ಅಥವಾ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಂತಹ ಭಾರತೀಯ ದಲಿತರು, [ಯಾಕೆಂದ್ರೆ ಇಲ್ಲಿ ದಲಿತರು ಅಂತ ಹೇಳಿದ ಕೂಡಲೆ Supress ಆಗಿರೋರು ಅಂತಹ Category ಯವರು] ಅವರಿಗೆ ನಾವೇಕೆ ಪ್ರಶ್ನೆಗಳನ್ನು ಎತ್ತೋದಿಲ್ಲ ? ಅವರ ಪರವಾಗಿ ನಾವೇಕೆ ಧ್ವನಗಳನ್ನ ಎತ್ತೋದಿಲ್ಲ ? ಅವರು ಕೂಡ ತುಳಿತಕ್ಕೆ ಒಳಗಾದವರು ಚರ್ಚಿನೊಳಗೆ ದಲಿತರಿಗೆ ಇವತ್ತಿಗೂ ಕೂಡಾ ಸ್ಥಾನಮಾನಗಳಿಲ್ಲ. ಮುಸ್ಲಿಂ ಸಮುದಾಯಗಳಲ್ಲಿ ಇರುವಂತಹ ಉದ್ದಾಫಿಗಳಾಗಲಿ ಅಥವಾ ಬೇರೆ ಸಮುದಾಯಗಳಿಗಾಗಲಿ, ಉದಾಹರಣೆಗೆ, ಮಂಡಲ್ ಕಮಿಷನ್ ಹಾಗೂ ಹಾವನೂರು ಕಮಿಷನ್ ಯಾವುಗಳನ್ನು identify ಮಾಡುತ್ತದೆ, ಅವುಗಳಿಗೆ ಸ್ಥಾನಮಾನಗಳಿಲ್ಲ. ಉದಾಹರಣೆಗೆ, ನಾನು ಉಡುಪಿಯವನು, ನಮ್ಮೂರ ಕಡೆ, ಊರ ಪಕ್ಕದಲ್ಲಿ ಒಂದು ದೇವಸ್ಥಾನ ಇದೆ. ಅಲ್ಲಿಯ ನಗಾರಿಗಳನ್ನ ಬಾರಿಸುವವರು ಮುಸ್ಲಿಮರು, ನಗಾರಿಗಳನ್ನ ಬಾರಿಸಬೇಕಾದರೆ, ಅವರು ಸಂಜೆ ಕುಡಿಯಬೇಕು. ಸಂಜೆ ಕುಡಿದು ನಗಾರಿಗಳನ್ನ ಬಾರಿಸಬೇಕು. ಅವರಿಗೆ ಸಮಾಜದಲ್ಲಿ ಸ್ಥಾನಮಾನವಿಲ್ಲ. ಅವರು ಒಂದು ಇಡೀ ಧರ್ಮದ ಚೌಕಟ್ಟಿನಲ್ಲಿ ಅತ್ಯಂತ ತುಳಿತಕ್ಕೊಳಗಾದವರು. ಇಂತಹುದು ಬೇಕಾದಷ್ಟಿದೆ. ಉದಾಹರಣೆಗೆ ಇವತ್ತು ನಾವು Synchritic culture ಅಂತ ಏನು ಹೇಳ್ತೀವಿ, ಸಮನ್ವಯ ಸಂಸ್ಕೃತಿ, ಬಾಬಾಬುಡನ್ ಗಿರಿಯ ಸಂಸ್ಕೃತಿ ಏನಿದೆ, ಅಲ್ಲಿ ಹೋಗಿ ನೋಡಿದರೆ ನಿಮಗೆ ಗೊತ್ತಾಗುತ್ತೆ. ಅಲ್ಲಿಗೆ ಬರುವ ವ್ಯಕ್ತಿಗಳು ಮೇಲುಜಾತಿಯವರಲ್ಲ. ಮೇಲು ವರ್ಗದವರಲ್ಲ. ಅಲ್ಲಿ ಬರುವವರು ಕೆಳಜಾತಿಯ, ಕೆಳವರ್ಗದವರು. ಅವರಿಗೂ ಕೂಡ ಸ್ಥಾನಮಾನಗಳಿಲ್ಲ. ಇಲ್ಲಿ ನಾ ಕೇಳೋ ಪ್ರಶ್ನೆ ಏನು ಅಂತಂದ್ರೆ, ಬಹುಶಃ ಸಮುದಾಯ ಚಳುವಳಿಕೂಡ ಈ ಮಾತನ್ನು ಪರಿಗಣಿಸಬೇಕಾಗುತ್ತದೆ. ಇದು ನನ್ನ ಅನಿಸಿಕೆ. ಯಾಕೆ ದಲಿತ

issue ಬರೀ ಒಂದು ಧಾರ್ಮಿಕ ಚೌಕಟ್ಟಿನೊಳಗೆ ಸೇರಿಕೊಳ್ಳಬೇಕು? ಆದ ಕಾರಣ ಬೇರೆ ಬೇರೆ ಧಾರ್ಮಿಕ ಚೌಕಟ್ಟಿನಲ್ಲಿರುವಂತಹ ಎಲ್ಲಾ ದಲಿತರು ಯಾಕೆ ಒಳಗೊಳ್ಳಬಾರದು. ಆ ಮುಖಾಂತರ ಒಂದು ಸಮನ್ವಯತೆ ಸಾಧ್ಯವೇ?

'ದಲಿತ' ಎಂಬುದೊಂದು Broader concept ವಿಶಾಲವಾದ ಒಂದು Concept. ಅದು ಆ conceptನೊಳಗೆ ಎಲ್ಲಾ ದಲಿತರು ಸೇರಿಕೊಂಡರೆ ಒಂದು ಸಮನ್ವತೆಯನ್ನು ಸಾಧಿಸೋಕೆ ಸಾಧ್ಯವೇ? ಉದಾಹರಣೆ ಇವತ್ತು ನಾವು ಬೇರೆ ಬೇರೆ ಸಾಮಾಜಿಕ ಸಮನ್ವಯತೆ ಬಗ್ಗೆ ಮಾತನಾಡುತ್ತೇವೆ. Congress ಒಂದು ಕಾಲದಲ್ಲಿ ಮಾಡಿತ್ತು 'ಖಾಮ್' ಅಂತ ಹೇಳಿ Kshatriyas, Harijans, and muslimes ಅಂತ ಹೇಳಿ, ಗುಜರಾತಿನಲ್ಲಿ ಮೋದಿ ಬಂದ ಮೇಲೆ ಆ 'ಖಾಮ್' ಅನ್ನು ಖಲ್ಲಾಸ್ ಮಾಡಿದರು ಅಥವಾ ಲೋಕದಲ್ ಒಂದು ಮಾಡಿತು 'ಅಜ಼್‌ಗರ್' ಅಂತ ಹೇಳಿ. Ahirs, Gujjars & Rajputs ಅಲ್ಲಿ ಬೇರೆ ಬೇರೆ ಜಾತಿಗಳ ಒಂದು ಸಮನ್ವಯತೆ ಮಾಡಿತು. 'ಖಾಮ್' ನೋಡಿ! Kshatriyas, Harijans Aadivasis & Muslims, ಎರಡನೆಯ ಪ್ರಶ್ನೆ. ನಾ ಮುಂದೆ ಪ್ರಸ್ತಾಪಿಸುತ್ತೇನೆ. 'ಆದಿವಾಸಿಗಳು ಯಾಕೆ ದಲಿತರ Categoryಯಲ್ಲಿ ಬರುತ್ತಿಲ್ಲ?" ಎಂದು 'ಖಾಮ್' ಒಂದು Socail coatition, national social coalition; ಒಂದು ಪರಿಕಲ್ಪನೆಯ ಸಾಮಾಜಿಕ ಸಮನ್ವಯತೆ ಒಂದು actual ಅಲ್ಲ, ವಾಸ್ತವ ಅಲ್ಲ, ಯಾಕೆಂದ್ರೆ ಇಲ್ಲಿ ಸಾಕಷ್ಟು ವೈರುಧ್ಯ ಗಳಿವೆ. ಉದಾಹರಣೆಗೆ, 'ಅಹಿಂದಾ'ಯೆಂಬುದು ಒಂದು ಸಾಮಾಜಿಕ ಸಮನ್ವಯತೆ. ಅದು ರಾಜಕೀಯ ಸಮನ್ವತೆಯಾಗಿ ಪರಿವರ್ತನೆಗೊಳ್ಳಬಹುದು. ಅಹಿಂದ ಅಂದರೆ englishನಲ್ಲಿ ನಾನು 'Mod' ಅಂತ ಕರೀತೇನೆ. ಅದನ್ನ ಮೊದಲು ನಾನು 'MOVD' ಅಂತ ಕರೀತಿದ್ದೆ. Muslims, Other backward classes Vokkaligas and dalits ಈಗ 'V' ಇಲ್ಲ. MOD ಇದೆ. ಅದಕ್ಕೆ ಅಹಿಂದ ಅಂತ ಕರೀತೇನೆ. ನಾನು.

ಅಲ್ಪಸಂಖ್ಯಾತರು. ಹಿಂದುಳಿದ ವರ್ಗದವರು ಮತ್ತು ದಲಿತರು. ಈ ಸಮನ್ವಯತೆ ಎಷ್ಟರಮಟ್ಟಿಗೆ ಗಟ್ಟಿಯಾಗಿದೆ ಗಟ್ಟಿಯಾಗಬಹುದು? ಇದನ್ನ ನೀವು ವಿಶ್ಲೇಷಿಸುತ್ತಾ ಹೋದಾಗ, ಈ ಸಮನ್ವಯತೆಯೆಂಬುದು ಒಂದು ರೀತಿಯಲ್ಲಿ 'ಟೊಳ್ಳು' ಎನ್ನಬಹುದು. ಇದೊಂದು Notional ಆಗಿ, Imagined ಆಗಿ ಕಂಡುಬರುತ್ತೆ. ಇದಕ್ಕೆ ಮುಖ್ಯ ಕಾರಣಗಳು ಏನೆಂದರೆ, ಇದರಲ್ಲಿನ ವೈರುಧ್ಯಗಳು. ದಲಿತರ ವೈರುಧ್ಯಗಳು ಇವತ್ತು ಪ್ರಾಥಮಿಕ ವೈರುಧ್ಯಗಳು ಹಿಂದುಳಿದ ವರ್ಗಗಳು ಕೂಡಾ ಆಗ್ತಾ ಇದೆ. Thats an interesting thing. ಭಾರತದ ಸಂದರ್ಭದಲ್ಲಿ ಇವತ್ತು ದಲಿತರದ್ದು ಪ್ರಾಥಮಿಕ ವೈರುಧ್ಯಗಳು. ನಾವಿಲ್ಲಿ ಕೆಲವು ರೀತಿಯ ವೈರುಧ್ಯಗಳನ್ನು ನೋಡಬೇಕು. ಪ್ರಾಥಮಿಕ ದ್ವಿತೀಯ ವೈರುಧ್ಯಗಳು, ಪ್ರಾಥಮಿಕ ವೈರುಧ್ಯಗಳು ಯಾಕಾಗಿದೆ ಅಂದ್ರೆ ಭಾರತ ಸಂದರ್ಭದಲ್ಲಿ ಬೆಳೆದುಬಂದಂತಹ ಅಭಿವೃದ್ಧಿಯ ಪರಿಯನ್ನು ನಾವು ನೋಡುತ್ತಾ ಹೋಗಬೇಕು. ಆರಂಭದಲ್ಲಿ ಭಾರತದ ಅಭಿವೃದ್ಧಿಯ ಪರಿಯಲ್ಲಿ ಮೇಲು ಜಾತಿ ಮತ್ತು ಮಧ್ಯಮ ಜಾತಿಗಳ ನಡುವೆ ಅಥವಾ ಹಿಂದುಳಿದ ಜಾತಿಗಳ ನಡುವೆ ಪ್ರಾಥಮಿಕ ವೈರುಧ್ಯಗಳು ನಡೆದಿತ್ತು. ಇದಕ್ಕೆ ಉತ್ತಮ ಉದಾಹರಣೆಯನ್ನು Anti Brahmin movementನಲ್ಲಿ ನೋಡಬಹುದು. 1920ರ ಸುಮಾರಿಗೆ ದಕ್ಷಿಣ ಭಾರತದಲ್ಲಿ ನಡೆದಂತಹ ಬ್ರಾಹ್ಮಣ ವಿರೋಧಿ, ಬ್ರಾಹ್ಮಣೇತರ ಚಳುವಳಿಗಳಲ್ಲಿ ನೋಡಬಹುದು. ಇದನ್ನ All India Levelನಲ್ಲಿ ಕೂಡಾ ನೋಡಬಹುದು ಉದಾಹರಣೆಗೆ ಕಾಂಗ್ರೆಸ್‌ನಲ್ಲಿ 1885 ರಿಂದ 1910ರ ತನಕ ಇದ್ದಂತಹ ನಾಯಕರುಗಳ ಅಥವಾ ಆಗಿನ ಸಾಮಾಜಿಕ ತಳಹದಿಯನ್ನು ನೋಡಿದರೆ ಗೊತ್ತಾಗುತ್ತದೆ. ಮೇಲುಜಾತಿಯಿಂದ ಮೇಲು ವರ್ಗದಿಂದ Metropolitan

cities ಇಂದ ಬಂದಂತಹವರು, ಕಾಂಗ್ರೆಸ್‌ನ ನಾಯಕರು. 1910ರ ಮಧ್ಯಮ ಜಾತಿಗಳಿಂದ, ಕೆಲವು cityಗಳಿಂದ, townsಗಳಿಂದ ಬಂದಂತಹವರು. ಆಮೇಲೆ ಗಾಂಧಿ ಬಂದ ಮೇಲೆ ಅದು ರಾಷ್ಟ್ರೀಯ ಹೋರಾಟವಾಯಿತು. ನಿಜವಾದ ರಾಷ್ಟ್ರೀಯ ಹೋರಾಟ, 40–50ರ ಸುಮಾರಿಗೆ ಅದು ನಿಜವಾಗಿ ಎಲ್ಲಾ ಹಳ್ಳಿ ಹಳ್ಳಿಗೂ ಹರಡಿತು ಇಲ್ಲಿ ವೈರುಧ್ಯಗಳು ತೀಕ್ಷ್ಣ ವಾಗುತ್ತಿದ್ದ ಹಾಗೆಯೇ ಹೊಸ ಹೊಸ ಜಾತಿಗಳು ಕೂಡಾ ರಾಜಕೀಯ Spaceಗಳಿಗಾಗಿ ಹೋರಾಟ ಮಾಡ್ತವೆ. ಗಾಂಧಿ, ಕಾಂಗ್ರೆಸ್ ಕೂಡಾ ಈ ಸಮನ್ವಯತೆಯನ್ನು ಮಾಡಿತು. ಕಾಂಗ್ರೆಸ್ ಅನ್ನೋದು ಒಂದು ದೊಡ್ಡ ಆಲದ ಮರ. ಅದರ ಕೆಳಗೆ ಏನೂ ಬೆಳೆಯೋದಿಲ್ಲ, ಅದಕ್ಕೆ ಜೋತು ಬಿದ್ದು ಯಾರು ಬೇಕಾದರೂ ಆತ್ಮಹತ್ಯೆ ಮಾಡಿಕೊಳ್ಳಬಹುದು. ಇಲ್ಲಾಂದ್ರೆ ಬ್ರಿಟಿಷರು ಮಾಡಿದ ಹಾಗೆ ಎಲ್ಲರನ್ನೂ ಕೊಂಡೊಯ್ದು ಆ ಮರಕ್ಕೆ ನೇಣು ಹಾಕಿಬಿಡುವುದು. ನೀವು ಚಿತ್ರಗಳನ್ನ ನೋಡಿದರೆ ಗೊತ್ತಾಗುತ್ತೆ, ಬ್ರಿಟಿಷರು ಎಲ್ಲಿ ನೇಣುಹಾಕಿದ್ದರು ? 'ಆಲದ ಮರಕ್ಕೆ'. ಕಾಂಗ್ರೆಸ್ ಕೂಡಾ ಎಲ್ಲರನ್ನೂ ಕೊಂಡೊಯ್ದು ನೇಣುಹಾಕಿತ್ತು. ಹಿಂದುಳಿದ ಜಾತಿಯವರನ್ನು ಬಾಬು ಜಗಜೀವನ ರಾಮ್‌ರವರನ್ನು opt ಮಾಡಿ ನೇಣುಹಾಕಿದ್ದು ಯಾರು ? 'ಕಾಂಗ್ರೆಸ್'. ಬಾಬು ಜಗಜೀವನ್ ರಾಮ್ ಸ್ವಾತಂತ್ರ್ಯದ ನಂತರ 70–75ರ ಸುಮಾರು ಈ 'ಜನತಾ experiment' ಬಂದ ಕಾಲದಲ್ಲಿ ಭಾರತದ ಪ್ರಧಾನಮಂತ್ರಿ ಆಗಬಹುದಿತ್ತು. ತಮ್ಮ ಕಾಂಗ್ರೆಸ್‌ನ Democracy ಮುಖಾಂತರ ಕೂಡಾ ಆಗಬಹುದಿತ್ತು. ಅವರು ಹೊರಬಂದದ್ದು ಏಕೆ ಅಂದ್ರೆ, ಕಾಂಗ್ರೆಸ್ ಅವರನ್ನು ನೇಣುಹಾಕಿದ್ದನ್ನು ನೋಡಿದ್ದರು. ಇದೊಂದು ದೊಡ್ಡ Politics, Politics of co-option. ಅದರೊಂದಿಗೆ, ಕಾಂಗ್ರೆಸ್ ಯಾವತ್ತೂ ಕೂಡಾ ಯಾವುದೇ ರೀತಿಯ ವೈರುಧ್ಯಗಳನ್ನು ಪ್ರಬಲವಾಗುವುದಕ್ಕೆ ಬಿಡುತ್ತಿರಲಿಲ್ಲ. ಕಾಂಗ್ರೆಸ್ ಗಾಂಧಿಗೂ ಕೂಡಾ ಬೇಕಿರಲಿಲ್ಲ. ಗಾಂಧಿಗೂ ಕೂಡ ಒಂದು ಸಮನ್ವಯತೆ ಬೇಕಿತ್ತು. ಅದಕ್ಕಾಗಿ Symbolic Representation ಬೇಕಿತ್ತು ಅಷ್ಟೆ. ಆ Representation ಏನು ಅಂದ್ರೆ ಮೌನವಾಗಿರಬೇಕು. ಗಾಂಧಿಯನ್ನು ಪ್ರಶ್ನಿಸಬಾರದು, ಕಾಂಗ್ರೆಸ್‌ನ ಯಜಮಾನಿಕೆಯನ್ನು ಪ್ರಶ್ನಿಸಬಾರದು, ಗಾಂಧಿಯ ಯಜಮಾನಿಕೆಯನ್ನು ಪ್ರಶ್ನಿಸಬಾರದು. ಆದರೆ ಒಂದು ಸಮನ್ವತೆಯನ್ನು ತೋರಿಸಬೇಕು. ಅದು Social Coalitonನಲ್ಲಿ ಕೂಡಾ ಇತ್ತು. ಆದ ಕಾರಣ ಕಾಂಗ್ರೆಸ್ ಒಳಗೆ ದಲಿತರು, ಹರಿಜನರು ಕೂಡಾ ಇದ್ದರು. ಆದರೆ ಗಾಂಧಿ ಕೂಡಾ, ನನಗೆ ತಿಳಿದಮಟ್ಟಿಗೆ, ಒಂದು Independant Identity ಯನ್ನು ಕೊಡುವುದಕ್ಕೆ ಬಿಡುತ್ತಿರಲಿಲ್ಲ. ಒಂದು best example, ಗಾಂಧೀಜಿಯ ಆಶ್ರಮದಲ್ಲಿ ಒಬ್ಬ ದಲಿತ ಹುಡುಗ ಮೇಲುಜಾತಿಯ ಹುಡುಗಿಯನ್ನು ಪ್ರೇಮಿಸಿದನಂತೆ. ಗಾಂಧಿಗೆ ಗೊತ್ತಾಗಿ, ತಮ್ಮ typical strategyಯಂತೆ, ಸತ್ಯಾಗ್ರಹ ಮಾಡಿದರು. ಇದೊಂದು ನಾ ಓದಿದ ಹಳೇ ಕಥೆ, so, ಗಾಂಧಿ ಆಶ್ರಯದಲ್ಲಿ ಒಬ್ಬ ದಲಿತ ಹುಡುಗ ಪ್ರೀತಿಸಿದರೆ, ಗಾಂಧಿ ತನ್ನ ಆತ್ಮ ಶುದ್ಧಿಗಾಗಿ Strike ಮಾಡ್ತಿದ್ರು, ಇದನ್ನ ನಾನ್ಯಾಕೆ ಹೇಳ್ತಿದ್ದೇನೆ ಅಂದರೆ, ಒಂದು ರೀತಿಯ ಸಮನ್ವಯತೆಯಲ್ಲಿ ಒಂದು independant identityಯನ್ನು ಕೊಡ್ತಿರಲಿಲ್ಲ. ಆದರೆ ಅದರೊಂದಿಗೆ ನಾವು ಇಲ್ಲಿರುವ contradictonsಗಳನ್ನ ಅರ್ಥಮಾಡಿಕೊಳ್ಳಬೇಕು. Contradictions ಅಥವಾ ವೈರುಧ್ಯಗಳು ತೀವ್ರವಾಗಿ ಇರುತ್ತದೆ. ಕೆಲವು ಕಾಲದಲ್ಲಿ ಅದು ತೀಕ್ಷ್ಣವಾಗಿರುತ್ತದೆ. ಮಧ್ಯಮ ಜಾತಿಗಳ ನಡುವೆ ಮತ್ತು ಕೆಳ ಜಾತಿಗಳ, ಶೂದ್ರರ ನಡುವೆ, ಅಥವಾ ದಲಿತರ ನಡುವೆ ನಡೆದಂತಹ ಆ ತೀವ್ರವಾದಂತಹ ವೈರುಧ್ಯಗಳು, ಕೆಲವೊಮ್ಮೆ ಬೇರೆ ಬೇರೆ ರೀತಿಗಳಲ್ಲಿ ವ್ಯಕ್ತವಾಗುತ್ತದೆ. ಕೆಲವೊಮ್ಮೆ ದಲಿತರೂ ಕೂಡಾ ಈ contradictionsಗಳನ್ನ ಮರೆ ಮಾಚುವುದಕ್ಕೆ ಒಂದು ರೀತಿಯ compromise

ಮಾಡಿಕೊಂಡು ಬಿಡುತ್ತಾರೆ. ಬಹುಶಃ ನಿಮಗೆ ಗೊತ್ತಿರಬಹುದು, 'ಕಾಂಶಿ ರಾಮ'ನ Politics ಭಾರತ ಸಂದರ್ಭದಲ್ಲಿ, ಕಾಂಶಿ ರಾಂ, ತನ್ನ ಇಡೀ Politicsಅನ್ನು Pen ಮುಖಾಂತರ explain ಮಾಡುತ್ತಿದ್ದರು. ಇವರ ಮತ್ತು ಅವರ ಪ್ರಕಾರ ಕೆಳಜಾತಿಯವರು ಇಷ್ಟಿದ್ದಾರೆ, ಮಧ್ಯಮ ವರ್ಗದವರು ಇಷ್ಟಿದ್ದಾರೆ, ಮೇಲುವರ್ಗದವರು ಇಷ್ಟಿದ್ದಾರೆ. ಇದನ್ನ ಅವರು ಒಂದು Pen ಹಿಡ್ಕೊಂಡು Analyse ಮಾಡ್ತಾರೆ. ಇವತ್ತು BSP ಯಾವಾಗ ಒಂದು anti-Brahmin rhetoricಅನ್ನು ತೆಗೆದುಕೊಂಡವೊ, ಆ rhetoric ಇದನ್ನು ಮರೆಮಾಚಿಬಿಟ್ಟಿದೆ. ವಾಸ್ತವತೆ ಏನೂ ಅಂದ್ರೆ, ಇವತ್ತು ಅತೀ ಹೆಚ್ಚು ಟಿಕೇಟುಗಳನ್ನು ಬ್ರಾಹ್ಮಣರಿಗೆ ಕೊಟ್ಟಿದ್ದಾರೆ. ಬ್ರಾಹ್ಮಣರು ಸಮಾವೇಶ ಮಾಡಿದ್ದಾರೆ. ಅದರ ಅರ್ಥ ಏನಂದರೆ, ವೈರುಧ್ಯಗಳು ಗೊತ್ತಿದ್ದರೂ ಕೂಡಾ ತೀಕ್ಷ್ಣವಾಗಿದ್ದರೂ ಕೂಡಾ ಇವತ್ತಿನ ಅಧಿಕಾರದಲ್ಲಿರುವ ಮೇಲುಜಾತಿಯವರು ಕೆಳಜಾತಿಯವರಿಗೆ ಅವಕಾಶ ಮಾಡಿಕೊಡುವುದಿಲ್ಲ ಅಂತ. ಮತ್ತೊಂದು example ಕೊಡಬೇಕಂದ್ರೆ, ಮೊನ್ನೆ AIIMSನಲ್ಲಿ ನಡೆದಂತಹ Strike. ಡಾ॥ ವೇಣುಗೋಪಾಲ ವಿರುದ್ಧ ಅದು ವೇಣುಗೋಪಾಲ್ ಮತ್ತು ಡಾ॥ ರಾಮದಾಸ್ ನಡುವೆ ನಡೆದಂತಹ ಘರ್ಷಣೆಯಲ್ಲ. ಅದು ಮೂಲತಃ reservation policy ಮೇಲೆ ಡಾ॥ ವೇಣುಗೋಪಾಲ ತೆಗೆದು ಕೊಂಡಂತಹ ನಿಲುವು. ಡಾ॥ ವೇಣುಗೋಪಾಲ ಇವತ್ತು ಕೂಡಾ ಅತ್ಯಂತ ಪ್ರತಿಭಾನ್ವಿತ heart Specialist. ಜಗತ್ತಿನ One of the top most heart surgeon. ಅವರ ನಿಲುವಿಗೂ ನಮ್ಮ ನಾರಾಯಣಮೂರ್ತಿಯ ನಿಲುವಿಗೂ ಏನೂ ವ್ಯತ್ಯಾಸ ಇಲ್ಲ. ಡಾ॥ ವೇಣುಗೋಪಾಲ ಹೇಳುವುದೇನೆಂದರೆ "Merit should Be The consideration' A merit consideration ಇದ್ದ ಕಾರಣಾನೇ ನೀವು AIIMSನ Hostelನಲ್ಲಿದ್ದಿರಿ ಅಥವಾ AIIMSನ Doctorsಗಳ ಸ್ಥಿತಿಯೇನೆಂದರೆ ದಲಿತ Doctorsಗಳನ್ನು ತುಳಿತಾಯಿದ್ದಾರೆ ಇದು ವಾಸ್ತವತೆ. ಒಂದು ಕಡೆ ಇಂಥಾ contradictions ಬಹಳ ತೀವ್ರವಾಗಿರುತ್ತದೆ. ಅದು ಜಾತಿ ಘರ್ಷಣೆಗಳಲ್ಲಿ ಬೇರೆ ಬೇರೆ ರೂಪದಲ್ಲಿ ವ್ಯಕ್ತವಾಗುತ್ತಿದ್ದರೆ ಮತ್ತೊಂದು ಕಡೆ ಈ ಘರ್ಷಣೆಗಳು ಇದ್ದರೂ ಕೂಡ ಅದನ್ನು ಮರೆಮಾಚಲು Compromise ಆಗುತ್ತಿದ್ದಾರೆ. ಬಹುಶಃ ಇದು ದಲಿತ ಚಳುವಳಿಗಳ ಮತ್ತು ದಲಿತ ರಾಜಕಾರಣದ ಒಂದು ದ್ವಂದ್ವತೆ ಅಂತ ಕರಿಯಬಹುದು. ನಾನು ಹೇಳಿದ ಹಾಗೇ, ಇವತ್ತು ಒಂದು ಕಡೆ ಇಂತಹ ಸಮನ್ವಯತೆಗಳಿವೆ. ಅಹಿಂದದಲ್ಲಿ ಇಂತಹ ಸಮನ್ವಯತೆ ಗಟ್ಟಿಯಾಗಲು ಸಾಧ್ಯವಿದೆಯೇ ?

ಈ ಸಮನ್ವಯತೆಯನ್ನು ಅರ್ಥ ಮಾಡಿಕೊಳ್ಳಲು ನಾವು ವೈರುಧ್ಯಗಳನ್ನು ಅರ್ಥ ಮಾಡಿಕೊಳ್ಳಬೇಕು. ದಲಿತರ ವೈರುಧ್ಯಗಳು ಹಾಗೂ ಮುಸ್ಲಿಮರ ವೈರುಧ್ಯಗಳು ಒಂದೇ ಅಲ್ಲ. ದಲಿತರು operate ಮಾಡುವಂತಹುದು ಮೂಲತಃ ಗ್ರಾಮೀಣ ಪ್ರದೇಶಗಳಲ್ಲಿ ಅವರಿಗೆ ಭೂಮಿ ಪ್ರಶ್ನೆ ಇವತ್ತು ಬಹಳ ಮುಖ್ಯವಾದಂತಹುದು. ದಲಿತ ಚಳುವಳಿಗಳಲ್ಲಿ ಭಾರತದ ಸಂದರ್ಭದಲ್ಲಿ ಭೂಮಿ ಪ್ರಶ್ನೆಗಳನ್ನು ಪುನಃ ಎತ್ತುಕೊಳ್ಳುವ ಸಂದರ್ಭಗಳು ಬಂದಿವೆ. ಅನಿವಾರ್ಯ. ಆದ ಕಾರಣ ಸಮುದಾಯ ಚಳುವಳಿಗಳು ಭೂಮಿ ಪ್ರಶ್ನೆಯನ್ನು ಪುನಃ ಎತ್ತಿಕೊಳ್ಳಬೇಕು. ಏಕೆಂದರೆ ಗ್ರಾಮೀಣ ಪ್ರದೇಶಗಳಲ್ಲಿ Identity ಬರುವುದು ಭೂಮಿಯ ಮುಖಾಂತರ. ಆದರೆ, ಭಾರತದ ಸಂದರ್ಭದಲ್ಲಿ ಭೂಮಿ ಪ್ರಶ್ನೆ ಮುಖ್ಯವಲ್ಲ ಅಂತ ನಮ್ಮ ರಾಜ್ಯ ಪರಿಗಣಿಸಿದೆ. ನಮ್ಮ ರಾಜ್ಯದ ಪ್ರಕಾರ 'ಇವತ್ತು ದಲಿತರಿಗೆ ಭೂಮಿ ಮುಖ್ಯವಲ್ಲ. Education is the most important issue' ವಸತಿ ಶಾಲೆಗಳು ಬಹಳ ಮುಖ್ಯ ಅಂತ ಹೇಳ್ತದೆ. ಇದನ್ನು ನಾನು ಒಪ್ಪೋದಿಲ್ಲ ಅಂತ ಅಲ್ಲ, education ಖಂಡಿತ ಬೇಕು. ಆದರೆ ಗ್ರಾಮೀಣ ಪ್ರದೇಶದಲ್ಲಿ ಇವತ್ತು ಕೂಡಾ ಭೂಮಿ ಪ್ರಶ್ನೆ ಅಷ್ಟೇ ಮುಖ್ಯವಾಗಿದೆ. ಬಹುಶಃ

ನಾವು ಇಡೀ ಭಾರತದಲ್ಲಿ ನೋಡಿದರೆ, ಭಾರತ ಸಂದರ್ಭದಲ್ಲಿ ಭೂ ಮಸೂದೆ ಕಾಯಿದೆಗಳು effective ಆಗಿ implement ಆಗಿದ್ದಿದ್ದರೆ, ಬಹುಶಃ ಈ ಪ್ರಶ್ನೆ ಇವತ್ತು ಬರುತ್ತಿರಲಿಲ್ಲ. ಇವತ್ತು ಜಾಗತೀಕರಣದ ಸಂದರ್ಭದಲ್ಲಿ ಭೂಮಿಯಿಂದ ಆಗುತ್ತಿರುವ ನಷ್ಟ ದಲಿತರ ಮೇಲೆ ಆಗುತ್ತಿದೆ. Mechanisation of Technologyಯಿಂದಾಗಿ New technology ಬಂದ ಕಾರಣ ಗ್ರಾಮೀಣ ಪ್ರದೇಶದಲ್ಲಿ ಬಹುಶಃ ದಲಿತ Agricultural labourersಗಳಿಗೆ ಸಿಗುವಂತಹ ಕೆಲಸಗಳು ಕಡಿಮೆಯಾಗುತ್ತಿದೆ. ಇಲ್ಲಿ ಬಹಳ ಮುಖ್ಯವಾದ ಅಂಶವೇನೆಂದರೆ ಭಾರತದ ಸಂದರ್ಭದಲ್ಲಿ ಈ ಭೂಮಿ ಪ್ರಶ್ನೆಯನ್ನು ಹೇಗೆ Supress ಮಾಡಲಾಗಿದೆ. ಹೇಗೆ defeat ಮಾಡಲಾಗಿದೆ. ಎಂಬುದು ನಮ್ಮ ರಾಜ್ಯ, ನಮ್ಮ ದೇಶ, ನಮ್ಮ ಸರ್ಕಾರಗಳು, ಮೂಲತಃವಾಗಿ ಕಾಂಗ್ರೆಸ್ ಸರ್ಕಾರ ಅಂತ ಹೇಳಬಹುದು, ಭೂಮಿ ಪ್ರಶ್ನೆಯನ್ನು ಸದಾ ಎತ್ತುತ್ತಿದ್ದದ್ದು ಕಾಂಗ್ರೆಸ್ಸೇ ಜನತಾ ಅಥವಾ ಬಿಜೆಪಿ ಯಾವತ್ತು ಎತ್ತಲಿಲ್ಲ. 1885ರಿಂದ ನೀವು ನೋಡುತ್ತಾ ಹೋದರೆ, ಕಾಂಗ್ರೆಸ್‌ನಲ್ಲಿ ಭೂಮಿ ಪ್ರಶ್ನೆ ಆಗಾಗ ಬರ್‍ತಾ ಇತ್ತು. 80ರಲ್ಲಿ Remisionsಗಳ ಮುಖಾಂತರ ಅಥವಾ Issuesಗಳ ಮುಖಾಂತರ ಭೂಮಿ ಪ್ರಶ್ನೆ ಆಗಾಗ ತಲೆ ಎತ್ತುತ್ತಿದ್ದವು. 1935ರಲ್ಲಿ Agrerian policy ಕಾಂಗ್ರೆಸ್ Adopt ಮಾಡಿದ್ದರ ಹಿಂದೆಯೇ ಒಂದು Politics ಇದೆ. ಏನೆಂದರೆ. ದೊಡ್ಡ ದೊಡ್ಡ ಜಮೀನುದಾರರು ಕಾಂಗ್ರೆಸ್‌ನ ಪರ ಇರಲಿಲ್ಲ. ಬ್ರಿಟಿಷರ ಪರ ಇದ್ದರು. The jaminadars ಅವರೆಲ್ಲರೂ ಕೂಡಾ ಬ್ರಿಟಿಷರ ಪರ ಇದ್ದರು. ಅವರಿಗೆ ಗೊತ್ತಿತ್ತು. ಬ್ರಿಟಿಷ್ ಸಾಮ್ರಾಜ್ಯಶಾಹಿ ಹೋದಮೇಲೆ ತಾವೆಲ್ಲರೂ ಕೂಡಾ ಭೂಮಾಲೀಕರ ಬದಲಿಗೆ ಭೂಹೀನ ಮಾಲಿಕರಾಗಿ ಬಿಡುತ್ತೇವೆಂದು. ತಮ್ಮ ವರ್ಗ Position ಹೋಗುತ್ತದೆಂದು ಅವರಿಗೆ ಖಚಿತವಾಗಿ ತಿಳಿದಿತ್ತು. ಎರಡನೆಯದಾಗಿ, ಅವರೆಲ್ಲರೂ ಕೂಡ ಉಂಡು-ತಿಂದು ಗಟ್ಟಿಯಾಗಿ ಇರುವಂತಹ ಜಾಯಮಾನ ಇರುವಂತಹ ವ್ಯಕ್ತಿಗಳು. ಒಂದು ಹೊಸಾ ಉತ್ಪಾದನಾ ಶಕ್ತಿ ಬಗ್ಗೆ ಅವರಿಗೆ ನಂಬಿಕೆ ಇರಲಿಲ್ಲ. ಜಮೀನುದಾರರು ಮೂಲತಃವಾಗಿ ಗೇಣಿಮೇಲೆ ಬದುಕುವರು. Basically, ಅವರು, non-productive relationsಗಳ ಮೇಲೆ ಇರುವ ವ್ಯಕ್ತಿಗಳು. ಕಾಂಗ್ರೆಸ್‌ನ Politics ಅಷ್ಟೆ. ಅವರಿಗೆ Popular support ಸಿಗ್ತಾ ಇದ್ದದ್ದು massಗಳಿಂದ non-productive relationsಗಳ ಮೇಲೆ ಇರುವ ವ್ಯಕ್ತಿಗಳಿಂದ

ಕಾಂಗ್ರೆಸ್‌ನ Politics ಅಷ್ಟೆ, ಅವರಿಗೆ Popular support ಸಿಗ್ತಾ ಇದ್ದದ್ದು Mass ಗಳಿಂದ, non zamindari categoyಗಳಿಂದ, ಆದ ಕಾರಣ ಕಾಂಗ್ರೆಸ್ ಬಂದ ಕೂಡಲೇ ಮೊಟ್ಟ ಮೊದಲಿಗೆ ಮಾಡಿದ್ದು, Anti jaminadari act. ಬಹಳ fantastic. ಎರಡನೆಯದು, Tenancy Act ಮೂರನೆಯದಾಗಿ ಅವರಿಗೆ Right to tenancy ಕೊಟ್ಟಿತು. ಅಲ್ಲಿರುವ Politicsನ ನಾವು ಅರ್ಥ ಮಾಡಿಕೋಬೇಕು. ಏನೆಂದರೆ, ಕಾಂಗ್ರೆಸ್ ಇದನ್ನೆಲ್ಲಾ ಮಾಡುವಾಗ, ಭೂಮಿ ಪ್ರಶ್ನೆಯನ್ನು ಒಂದು ರಾಜ್ಯದ ಪ್ರಶ್ನೆಯನ್ನಾಗಿ ಮಾಡಿತು. Central ವಿಷಯ ಅಲ್ಲ. ಅದಕ್ಕಾಗಿ ಭಾರತದಲ್ಲಿ Comprechensive Land Reform ಇಲ್ಲ. ಭಾರತದ ಅಭಿವೃದ್ಧಿ ಪಥವನ್ನು ನೋಡಿದರೆ ಗೊತ್ತಾಗುತ್ತದೆ. ಆ ಪಥ ಯಾವತ್ತೂ ಏಕರೂಪದಲ್ಲಿಲ್ಲ. ನಾವು ಕೆಲವೊಂದು ಕಡೆ ಬಂಡವಾಳಶಾಹಿಗಳು ಬೆಳೆದಂತಹ ರೂಪಗಳನ್ನು ನೋಡಬಹುದು. ಮತ್ತೊಂದು ಕಡೆ Feudalism ಇದ್ದಂತಹ ಪ್ರದೇಶಗಳನ್ನು ನೋಡಬಹುದು. Bihar is a classic case ಬಿಹಾರ್‌ನಲ್ಲಿ State ಇಲ್ಲ. Thats a stateless Society . That's a Communist state. They have reached a communist stage. Its a feuadal state ಅಲ್ಲಿ ಜೀವಕ್ಕೆ ಏನೂ ಬೆಲೆ ಇಲ್ಲ. ಇಂತಹ ಅಪರಿಪೂರ್ಣ

ಬೆಳವಣಿಗೆಗಳ ನಡುವೆ ಬೆಳೆದಂತಹ ವೈರುಧ್ಯಗಳು ಬಹಳ ತೀಕ್ಷ್ಣ. Land reformsಗಳನ್ನು ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಕಾಲಘಟ್ಟಗಳಲ್ಲಿ Introduce ಮಾಡಲಾಯಿತು ಈ Reformsಗಳನ್ನು Implement ಮಾಡುವಷ್ಟರಲ್ಲಿ ದಲಿತರಿಗೆ ಸಿಗಬೇಕಿದ್ದ ಭೂಮಿಗಳು ಭೂಮಾಲೀಕರಿಗೆ ಹೋಯಿತು. ಈ ಕಾರಣದಿಂದಲೇ ಬಿಹಾರ್, ಮಧ್ಯಪ್ರದೇಶ, ರಾಜಾಸ್ಥಾನಗಳಲ್ಲಿ ಇವತ್ತು ಕೂಡಾ jamindari System ಹಾಗೇ ಇದೆ. ಇಂತಹ ಜಮೀನುದಾರರು Land ceiling actಅನ್ನು ಅರಿತು ಅವರ ಜಮೀನುಗಳನ್ನು ತಮ್ಮ ಸಾಕುನಾಯಿಗಳ, ದನಕರುಗಳ ಬೇನಾಮಿಗಳ ಹೆಸರಿಗೆ ಮಾಡಿದರು. ಇದರಿಂದಾಗಿ ಭೂ ಮಸೂದೆ ಆಯ್ತು. Land ceiling act ಯಾವತ್ತೂ ಕೂಡಾ effectiveಆಗಿ implement ಆಗ್ಲಿಲ್ಲ.

1960ರಲ್ಲಿ Tanjorನಲ್ಲಿ ನಡೆದಂಥದ್ದು Caste violence ಅಲ್ಲ. Tanjore ಹಸಿರು ಕ್ರಾಂತಿಯ Green revoluction ಇದ್ದ ಕಾಲದಲ್ಲಿ ದಲಿತರು ತಮ್ಮ ಹೊಲಗದ್ದೆಗಳಲ್ಲಿ ಇದ್ದಂತಹ ಇಲಿಗಳನ್ನು ತಿಂದು ಜೀವಿಸುತ್ತಿದ್ದರು. Green revoluction should have brought prosperity but look at the poverty. ಅದೊಂದು ವೈರುಧ್ಯ ತಂದಿತ್ತು. ಅದು ತೀವ್ರವಾದ ವೈರುಧ್ಯಗಳಿಗೆ ಘರ್ಷಣೆಗಳಿಗೆ ಕೂಡಾ ಕಾರಣವಾಯಿತು. ಅಲ್ಲಿ ನಡೆದಂತಹ ಘರ್ಷಣೆಗಳನ್ನು ಜಾತಿ ಘರ್ಷಣೆ ಅಂತ ಕರೆದರು. ಆದರೆ ಅದು ಜಾತಿ ಘರ್ಷಣೆಗಳಾಗಿರಲಿಲ್ಲ. ಮೂಲತಃ ವರ್ಗ ಸಂಘರ್ಷವಾಗಿತ್ತು. ಭೂಮಿ ಪ್ರಶ್ನೆ ಇವತ್ತು ಕೂಡಾ ಜೀವಂತವಾಗಿದೆ. ನಮಗೆ Second generation of land reforms is essential ಇವತ್ತು reservation ಬಗ್ಗೆ ಮಾತನಾಡುವಾಗ ಈ ಪ್ರಶ್ನೆಯನ್ನೂ ಎತ್ತಬೇಕು ನಾವು. Effective land reform ಬೇಕು ಆದರೆ ಇವತ್ತು ಬಹಳಷ್ಟು ಜನ ಹೇಳ್ತಾರೆ" ಇವತ್ತು Land reforms is not the major issue, but globalisation." ನಾನು ಹೇಳೋದೇನೆಂದರೆ, ಈ ಜಾಗತೀಕರಣ ಎಲ್ಲಾ ಕಡೆ ನುಗ್ಗುವ ಮೊದಲು ನಮ್ಮ land reformsಗಳು ನಡೀಬೇಕು. ಯಾಕೆಂದ್ರೆ, ಆ Land reformsನಿಂದ ಒಂದು autonomous, ಸ್ವಾಯತ್ತ ವರ್ಗ ಬೆಳೆಯುವ ಸಾಧ್ಯತೆಗಳಿವೆ. ಆ ವರ್ಗ ಇವತ್ತು ಬೆಳೆದರೆ, ಬಹುಶಃ ದಲಿತರ emancipation ಆಗಬಹುದು. 'ಇವತ್ತು ದಲಿತರು ಬಹಳ ಮುಂದೆ ಬಂದಿದ್ದಾರೆ ಅವರಿಗೆ Reservationಗಳ ಅಗತ್ಯವಿಲ್ಲ. ಅದು anti-national' ಅಂತ ಇವತ್ತು ಮಾತನಾಡ್ತಾರೆ. ಅವೆಲ್ಲವೂ ಸುಳ್ಳು. ಉದಾಹರಣೆಗೆ Infosys ನಾರಾಯಣಮೂರ್ತಿ ಕೂಡ ಇದೇ ಹೇಳೋದು. Private sectorನಲ್ಲಿ ಕೊಡಬಾರದು. ಅಲ್ಲಿ merit is the consideration. ಇಲ್ಲಿರುವಂತಹ ಹುನ್ನಾರಗಳು, ತಾತ್ವಿಕತೆಯ ಬುನಾದಿಗಳನ್ನ ಅರ್ಥಮಾಡಿಕೊಳ್ಳಬೇಕು. Private Sector ನಿಜವಾಗಿ Merit ಬಗ್ಗೆ ಮಾತನಾಡುತ್ತಿಲ್ಲ. ಅದರ ಅರ್ಥ ಇಷ್ಟೆ, ಅದಕ್ಕೆ ತನ್ನ economic space shrink ಆಗುವ ಹೆದರಿಕೆ ಇದೆ. ಇವತ್ತು Private Sectorನಲ್ಲಿ ಒಂದು ವೇಳೆ Reservation ಕೊಟ್ಟರೆ, It becomes a pandora box ಎಲ್ಲಾ ವರ್ಗಗಳೂ ಕೇಳಬಹುದು. Economic spaceಗಳು ದಲಿತರು ಬಂದ ಕೂಡಲೇ Shrink ಆಗುತ್ತದೆ. Shrink ಆದರೆ ನಾಳೆ ಇಡೀ economics ದಲಿತರ ಕೈಗೆ ಹೋಗಬಹುದೆಂಬ ಹೆದರಿಕೆ ಈ magnetsಗೆ ಇದೆ. ನಮ್ಮ ದೇಶದಲ್ಲಿ ದಲಿತರು ಬಹುಶಃ ಶೇಕಡ 37 economyಯಲ್ಲಿರಬಹುದು. Unlike USA ನಮ್ಮ ದೇಶದಲ್ಲಿ Economic spaceಗಳನ್ನು ocupy ಮಾಡಿರುವಂತಹವರು ಮೇಲುಜಾತಿಯವರು ದಲಿತರಿಗೆ ಇವತ್ತು ಆ economic space ಇಲ್ಲ. ನನ್ನ ಪ್ರಶ್ನೆ ಇಷ್ಟೆ, ಇವತ್ತು ನಮ್ಮ ದೇಶ ದಲಿತರಿಗೆ ಎಷ್ಟು economic spceಗಳನ್ನ create ಮಾಡಿದೆ. ಮೂಲತಃ Political Spaceಗಳನ್ನ ಮಾತ್ರ Create ಮಾಡಿದೆ.

ಬೇಕಾದಷ್ಟು ಕಾನೂನುಗಳಿವೆ. SC/ST Act, Atttrocities act ಅಂತಹ ಹಲವಾರು ಕಾನೂನುಗಳಿವೆ ದಲಿತರ ಪರವಾಗಿ ಅಂತ ಹೇಳುತ್ತಾರೆ. ಅಂಬೇಡ್ಕರ್‌ಅನ್ನು ನಾವು ಅಧ್ಯಕ್ಷನನ್ನಾಗಿ ಮಾಡಿಲ್ವ, ಬಾಬು ಜಗಜೀವನ ರಾಂರನ್ನು ರಕ್ಷಣಾ ಸಚಿವರನ್ನಾಗಿ ಮಾಡಿಲ್ವ, 10–15 ಜನ ಗವರ್ನರ್‌ಗಳನ್ನು ಮಾಡಿಲ್ವ, K.R. Narayanನ President ಮಾಡಿಲ್ವ ಆದ ಕಾರಣ ನಮ್ಮ ರಾಜ್ಯ Soft. ನಮಗೆ ಏನು ಭ್ರಮೆ ಹುಟ್ಟುತ್ತದೆ ಅಂದರೆ, ನಮ್ಮ ರಾಜ್ಯ ದಲಿತರ ಪರವಾಗಿ ಬಹಳ ಮೃದುವಾಗಿದೆ ಎಂದು. ಆದರೆ ವಾಸ್ತವತೆ ಏನು ? ಇವತ್ತು SC, ST act ಮುಖಾಂತರ 14 ಲಕ್ಷಕ್ಕೂ ಹೆಚ್ಚು Caseಗಳು Register ಆಗಿದೆ. ಅದರಲ್ಲಿ ಎಷ್ಟು ಜನರಿಗೆ ಶಿಕ್ಷೆಯಾಗಿದೆ. Statistics ಗಳ ಪ್ರಕಾರ, 1.14%ಗಳಿಗೆ ಮಾತ್ರ ಶಿಕ್ಷೆಯಾಗಿದೆ. ಅದರ ಅರ್ಥವೇನೆಂದರೆ, ನಮ್ಮ ಮೃದುರಾಜ್ಯ ಸೋತುಹೋಗಿದೆ. ಅದೇ ಅಂಶ ನಾವು economic space ಗಳ ಬಗ್ಗೆ ಮಾತನಾಡುವಾಗ ತೆಗೆದುಕೊಳ್ಳಬೇಕು. ಎಲ್ಲೆಲ್ಲಿ economic Spaces ಗಳನ್ನ Create ಮಾಡಿದೆ ? ಎಲ್ಲೂ ಇಲ್ಲ. ನೆನ್ನೆ ನಾನು Statistics ನೋಡ್ತಿದ್ದೆ. ದಲಿತ NRIಗಳು ಬರೇ 3 ಜನ ಇದ್ದಾರೆ. ಎಲ್ಲಿದ್ದಾರೆ ದಲಿತರು ? World bankಗೆ ಹೋದರೆ ಅಲ್ಲಿ ಎಲ್ಲಾ ತಮಿಳುನಾಡಿನ ಐಯ್ಯಂಗಾರಿಗಳೇ ಕಾಣುತ್ತಾರೆ. ಇವರೆಲ್ಲರೂ ಸಂಬಂಧಿಗಳೇ ಮತ್ಯಾರೂ ಅಲ್ಲ. Indian Foreigh Servicesಗಳಿಗೆ ಹೋದರೆ ಅಲ್ಲೂ ಎಲ್ಲಾ ಬೇರೆಯವರೇ, except ಕೆ. ಆರ್. ನಾರಾಯಣ್‌ರ ಮಗಳು. ದಲಿತ ಚಳವಳಿಗಳು ಈ economic Spaces ಗಳ ಬಗ್ಗೆ ಯಾಕೆ ಪ್ರಶ್ನೆ ಎತ್ತುತ್ತಿಲ್ಲ? ರಾಜ್ಯ, ಸರ್ಕಾರ, ಈ ಪ್ರಶ್ನೆಯನ್ನು ಏಕೆ ಪರಿಗಣಿಸಲಿಲ್ಲ ? ಭಾರತದ ಎಲ್ಲಾ ಸರ್ಕಾರಗಳು ಮಾಡಿದಂಥ Politics ಏನೆಂದರೆ, Politics of co-option. ನಾಯಕರು ಹೇಳಿದ ಹಾಗೆ co-opt ಮಾಡುತ್ತಾ ಹೋಯಿತು Congressನ Politics is very simple, ಕಲ್ಯಾಣ್ ಸಿಂಗ್‌ನ NDA ಸರ್ಕಾರ ತೆಗೆದು ಹಾಕಿತ್ತು. ಎಲ್ಲಾ ಪಕ್ಷಗಳು ದಲಿತರನ್ನು ಒಂದು votebank ಅಂತಲ್ಲ, ಒಂದು ಸಂಕೇತ ಗಳನ್ನಾಗಿ ತೆಗೆದುಕೊಂಡರು. ತಮ್ಮ ಸಾಮಾಜಿಕ ತಳಹದಿಗಳನ್ನು ಬೆಳಸಲಿಕ್ಕೆ ನೋಡಿದರು. ಜಗಜೀವನ್ ರಾಮ್ ಒಬ್ಬ ದಲಿತರ Symbol. ಅವರು ಬಂದರೆ ಎಲ್ಲಾ ದಲಿತರು ಅವರ ಜೊತೆ. ಆದ ಕಾರಣ ಕಾಂಗ್ರೆಸ್‌ನ ತಳಹದಿ ಇನ್ನಷ್ಟು ವಿಸ್ತಾರವಾಗುತ್ತದೆ ಅಂತ, ಅಷ್ಟೇ, ಅವರನ್ನ President ಮಾಡಬಹುದಿತ್ತು. ಮಾಡಲಿಲ್ಲ Deputy P.M. ಮಾಡಬಹುದಿತ್ತು. ಮಾಡಲಿಲ್ಲ. ಏನೇನು ಮಾಡಲಿಲ್ಲ. ಆದ ಕಾರಣ ಇವರು Symbolismಗಳನ್ನು appropriate ಮಾಡುತ್ತಾರೆ ಅಷ್ಟೇ, ಎಲ್ಲಾ ಪಕ್ಷಗಳ, ಎಲ್ಲಾ ಸರ್ಕಾರಗಳ Politics ಇಷ್ಟೇ, ಈ Symbolismಗಳನ್ನ ತಮ್ಮ ಸಾಮಾಜಿಕ ತಳಹದಿಯನ್ನು ಬೆಳೆಸುವುದಕ್ಕೆ ನೋಡಿದ್ದಾರೆ ಹೊರತು ನಿಜವಾಗಿ economic spacesಗಳನ್ನ create ಮಾಡಲಿಲ್ಲ. ಆದ ಕಾರಣ, ಇವತ್ತಿನ ಭಾರತದ ಸಂದರ್ಭದಲ್ಲಿ majority of the Dalits ಅತ್ಯಂತ ಹೀನಾಯ ಸ್ಥಿತಿಯಲ್ಲಿದ್ದಾರೆ. ಅವರ ಮೇಲೆ ನಡೆದಂತಹ attrocities ಸಾಮಾನ್ಯವಲ್ಲ. ಇಂತಹ attrocitiesಗಳು Paperಗಳಲ್ಲಿ ಬಂದರೆ, ನಾವು ಅವನ್ನು ಓದೋದೇ ಮರೆತು ಬಿಡುತ್ತೇವೆ. Attrocities ಅನ್ನೋದು ಒಂದು Amnesia ಆಗ್ತಾ ಇದೆ.

ದಲಿತ ಪ್ರಶ್ನೆಗಳು ಬಂದಾಗ ನಾವು ಕೆಲವು ಅಂಶಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕು. ಇವತ್ತು ದಲಿತ ಪ್ರಶ್ನೆಯೆಂಬುದನ್ನು ಹಿಂದು ಸಮಾಜಕ್ಕೆ ಮಾತ್ರ ಸೀಮಿತಗೊಳಿಸಬಾರದು. ಇಲ್ಲಿ ಎರಡು ಅಂಶಗಳು ನನಗೆ ತೋಚುವಂತಹುದು. ಏನೆಂದರೆ, ನಾವು ಭಾರತಕ್ಕೆ ಮಾತ್ರ ಸೀಮಿತಗೊಳಿಸಬೇಕೆ? ಎರಡನೆಯದು, ಭಾರತ ಸಂದರ್ಭದಲ್ಲಿ ದಲಿತ ಪ್ರಶ್ನೆಯೆಂಬುದು ಬರೇ ಒಂದು ಜಾತಿಗೆ ಮಾತ್ರ ಸೀಮಿತಗೊಳಿಸಬೇಕೆ ಅಥವಾ ಬುಡಕಟ್ಟುಗಳಿಗೂ ಕೂಡ

ಪರಿಗಣಿಸಬೇಕೆ ಎಂಬುದು. ನಾನ್ಯಾಕೆ ಹೇಳುತ್ತಿದ್ದೇನೆ ಅಂದರೆ, ದಲಿತ ಅಂತ ಹೇಳಿದ ಕೂಡಲೆ ನಮಗೆ constitutional conceptsಗಳು ಬಂದು ಬಿಡುತ್ತದೆ, ಮನಸ್ಸಿಗೆ ದಲಿತರು ಅಂದರೆ Scheduled Casteಗಳು ಅಂತ. ಅದು Constitutional identityಗಳು. ವಾಸ್ತವತೆಯಲ್ಲಿ ದಲಿತ ಅಂತ ಹೇಳಿದ ಕೂಡಲೆ ಬಹುಶಃ ಬುಡಕಟ್ಟುಗಳನ್ನು ಕೂಡ ನಾವು ತೆಗೆದುಕೊಳ್ಳಬೇಕು. ಬುಡಕಟ್ಟುಗಳು ಕೂಡಾ ಇವತ್ತು ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ತುಳಿಯಲ್ಪಟ್ಟಂತಹ ವರ್ಗಗಳು Forest departmentಗಳಿಂದ ಇರಬಹುದು ಅಥವಾ ರಾಜ್ಯದಿಂದ ಇರಬಹುದು, ಭೂ ಮಾಲೀಕರಿಂದ ಇರಬಹುದು, ಅಥವಾ ಮೇಲು ಜಾತಿಗಳಿಂದ ಇರಬಹುದು, ಬೇರೆ ಬೇರೆ ಜಾತಿಗಳಿಂದ ಬುಡಕಟ್ಟುಗಳಲ್ಲಿ ಕೂಡಾ ತುಳಿಯಲ್ಪಟ್ಟಂತಹ ವರ್ಗಗಳು ಇವೆ. ಆದ ಕಾರಣ ಇವತ್ತು ದಲಿತ ಚಳುವಳಿಗಳು ಅಥವಾ ದಲಿತ ಸಮುದಾಯಗಳು ಈ ಪ್ರಶ್ನೆಯನ್ನು ಎತ್ತುಕೊಳ್ಳಬೇಕು. ದಲಿತ ಎಂಬುದು ಒಂದು ಜಾತಿಗೆ ಮಾತ್ರ ಸೀಮಿತಗೊಳಿಸುವುದರ ಬದಲು ಜಾತಿಯಿಂದ ಹೊರಬಂದು ಬೇರೆ ಬೇರೆ ವರ್ಗಗಳ ಜತೆ ಒಂದು ಸಮನ್ವಯವನ್ನು ಸಾಧಿಸುವ ಯತ್ನಗಳನ್ನು ಮಾಡಬೇಕು. ಅದನ್ನು ಮಾಡುವುದಕ್ಕೆ ಸರ್ಕಾರ, ರಾಜ್ಯ ಬಿಡುವುದಿಲ್ಲ. ಮೂರನೆಯ ಪ್ರಶ್ನೆ, ದಲಿತ issue ಅನ್ನು ಬರೇ ಭಾರತಕ್ಕೆ ಸೀಮಿತಗೊಳಿಸಬಹುದೇ? ಉದಾಹರಣೆಗೆ ದಲಿತ ಪ್ರಶ್ನೆಯೆಂಬುದು ನೇಪಾಳದಲ್ಲಿ ಅತ್ಯಂತ ಪ್ರಮುಖವಾದಂತಹ ವಿಷಯ. ಪಾಕಿಸ್ತಾನದಲ್ಲಿ ಕೂಡಾ ಅದು ಪ್ರಮುಖ ವಾಗಿರುವಂತಹ ವಿಷಯ. ಬಾಂಗ್ಲಾದೇಶದಲ್ಲೂ ಅದು ಪ್ರಮುಖವಾಗಿದೆ. ನೇಪಾಳದ ಒಬ್ಬ ದಲಿತ ಪ್ರಪ್ರಥಮ ಬಾರಿಗೆ minister ಆದಾಗ, ತನಗೆ ಎಲ್ಲಾ ಅಧಿಕಾರಗಳಿವೆಯೆಂದು ಭ್ರಮೆಗೊಂಡು ಉಬ್ಬಿದ ಆದರೆ ನಿಜವಾಗಿ ಆತನಿಗೆ ಸಿಕ್ಕ ಅಧಿಕಾರಗಳೆಲ್ಲಾ ಟೊಳ್ಳು, ಅವನಿಗೆ ಮಾತಾಡುವ ಶಕ್ತಿ ಕೂಡಾ ಇರಲಿಲ್ಲ. ಅದೇ ರೀತಿಯ ವಾಸ್ತವತೆ, ನಮ್ಮ ಊರಿನ, 73ನೆಯ amendmentನಿಂದ ಬಂದಿರುವಂತಹ ಗ್ರಾಮ ಪಂಚಾಯಿತಿಯ ಸದಸ್ಯರುಗಳದು ಎಷ್ಟೋ ಜನ ಗ್ರಾಮ ಪಂಚಾಯಿತಿಯ ಸದಸ್ಯರುಗಳು 80–90ರ ಸುಮಾರಿನಲ್ಲಿ ದಲಿತ ಮಹಿಳೆಯರಿಗೆ ಮಾತನಾಡುವ ಶಕ್ತಿಯಿರಲಿಲ್ಲ. ಆದರೂ ಕೂಡಾ ನಾವು empowerment ಬಗ್ಗೆ ಮಾತನಾಡುತ್ತೇವೆ. ಹಲವಾರು 'Americaದ affirmitive Actionನ್ನು ಭಾರತ ದಲ್ಲಿಯೂ ಅಳವಡಿಸಬೇಕು. ಆಗ ದಲಿತರ ವಿಮೋಚನೆಯಾಗುತ್ತದೆ ಎಂದು ವಾದಿಸುತ್ತಾರೆ. But affirmitive action ನಲ್ಲಿರುವಂತಹ defeatism ಏನು ಅಂದರೆ, affirmitive action ಕೂಡ Meritನ ಮೇಲೆ ನಿಂತುಕೊಂಡಿದೆ. ಆ Merit ಅನ್ನೋದು ಬರೀ Marks ಮೇಲೆ ಅಲ್ಲ, 25 ಅಂಶಗಳ ಮೇಲೆ ನಿಂತಿದೆ ಭಾರತದಲ್ಲಿ Marks ಮಾತ್ರ determining factor. ಇದು ತಪ್ಪು, actually ವ್ಯಕ್ತಿಯ Meritನ Consider ಮಾಡೋದು ಬೇರೆ ಬೇರೆಯ ವಿಧಾನಗಳ ಮುಖಾಂತರ. ಉದಾಹರಣೆಗೆ, ಕೆಂಚೆಲ್ಲಯ್ಯ ತಮ್ಮ ಪುಸ್ತಕ 'Why I am not a Hindu' ಅಲ್ಲಿ ಇದರ ಬಗ್ಗೆ ಮಾತನಾಡುತ್ತಾರೆ. ದಲಿತರ Merit ನ ನೀವು consider ಮಾಡಬೇಕಾದರೆ, ಅವನ Productivity ಮುಖಾಂತರ Consider ಮಾಡಬೇಕು. ಅವನಗಿರುವಂತಹ capacity ಬಹುಶಃ ಬೇರೆ ವರ್ಗದವರಿಗೆ ಇಲ್ಲ. He is a real productive Labour ಈ ಕಾರಣದಿಂದಲೇ ದಲಿತನ Meritಗೂ ಒಬ್ಬ ಬ್ರಾಹ್ಮಣರ Meritಗೂ ಬಹಳ ವ್ಯತ್ಯಾಸ ಇದೆ.

ಭಾರತದಲ್ಲಿ ಈಗ Merit is the only Criteria for reservation ಅನ್ನುವಂತಹ ವಾದಗಳು ಪ್ರಾರಂಭಗೊಂಡಿದೆ. Educational Backwardnessಅನ್ನು Consider ಮಾಡುವಾಗ ಬೇರೆ ಬೇರೆ Considerationಗಳಲ್ಲಿ ಈ ಅಂಶವನ್ನು ಮಾತನಾಡುತ್ತಾರೆ. But

affirmitive actionನಲ್ಲಿ Marksಗಳನ್ನು ಮಾತ್ರ ತೆಗೆದುಕೊಳ್ಳುವದಿಲ್ಲ; ಒಬ್ಬನ Merit ಅನ್ನು Consider ಮಾಡುವುದಕ್ಕೆ 5–10 ಅಳತೆಗೋಲುಗಳಿವೆ. ಆ ಮುಖಾಂತರ ಒಬ್ಬನ Meritಅನ್ನು Consider ಮಾಡುತ್ತಾರೆ. Meritನ ಮಾನದಂಡಗಳನ್ನು ಬೇರೆ ರೂಪದಲ್ಲಿ ಇಟ್ಟುಬಿಡಿ. ಅದು ಇಡುವುದಿಲ್ಲ. ನಮ್ಮ ಸರ್ಕಾರದವರು. ಅದನ್ನು affirmitive action ಆಗಿ ಮಾಡಿದಾಗ ಎಷ್ಟು ದಲಿತರು ಮೇಲೆ ಬರಬಹುದಲ್ಲವೆ. Affirmitive action ಕೂಡಾ ಕೆಲವು ಕಡೆ defeat ಆಗಿದೆ. ಆದ ಕಾರಣ ಈಗಲೂ ಕೂಡಾ Americaದಲ್ಲಿ Blacksಗಳು ಅತ್ಯಂತ ಕೆಳ ಸ್ಥರದಲ್ಲಿದ್ದಾರೆ. ನೀವು washington D.Cಗೆ ಹೋದರೆ, ಭಿಕ್ಷುಕರು ಬಿಳಿಯರಲ್ಲ, ಕರಿಯರು. ನಾನು ಅಮೆರಿಕಕ್ಕೆ ಹೋದಾಗ ಮೊಟ್ಟಮೊದಲನೆಯದಾಗಿ ಹೇಳಿದ್ದು "ಏನಂದ್ರೆ" "ನೀನು ಪೋಲೀಸ್ neighbour hoodಗೆ ಹೋಗು, German neighbour hood ಹೋಗು ಆದರೆ black Neighbourhoodಗೆ ಹೋಗಬೇಡ ಯಾಕಂದ್ರೆ ಅವರು ನಿನ್ನ ಹಿಡಿದು ತಿನ್ನಬಹುದು, ಕೊಲೆ ಮಾಡಬಹುದು. ನನ್ನ universityಯ ಪಕ್ಕದಲ್ಲಿದದ್ದು black neighborhood ಪ್ರಪಂಚದಲ್ಲಿ ನೀವು ಎಲ್ಲೇ ಹೋದರೂ ಇವರು ಇದೇ ಸ್ಥಿತಿಯಲ್ಲಿ ಕಾಣುತ್ತಾರೆ. ಭಾರತದ ದಲಿತರಿಗೂ ಹಾಗೂ Blackಗಳಿಗೂ ವ್ಯತ್ಯಾಸವಿಲ್ಲ. ಇಬ್ಬರೂ ಕೂಡಾ 3 ರೀತಿಯಲ್ಲಿ ತುಳಿತಕ್ಕೆ ಒಳಪಟ್ಟವರು 1) ಜಾಗತಿಕ ಬಂಡವಾಳದಿಂದ, 2) ರಾಜ್ಯದಿಂದ 3) ಸಾಮಾಜಿಕ ಸ್ಥರದಲ್ಲಿ ಶೋಷಣೆಗೆ ಒಳಗಾಗಿದ್ದಾರೆ. ಈ ಮೂರರಲ್ಲಿ ಯಾವುದು ಪ್ರಾಥಮಿಕ ವೈರುಧ್ಯ? ರಾಜಕೀಯ ಸ್ತರದಲ್ಲಿ ನೋಡಿದರೆ, ರಾಜ್ಯ ಪ್ರಾಥಮಿಕ ವೈರುಧ್ಯ, ಸಾಮಾಜಿಕ ಸ್ತರದಲ್ಲಿ ಭೂಮಿ ಭೂಮಾಲೀಕರೇ ಪ್ರಾಥಮಿಕ ವೈರುಧ್ಯ, ಜಾಗತಿಕ ಮಟ್ಟದಲ್ಲಿ ಹೇಳುವಾಗ, ಜಾಗತಿಕ ಬಂಡವಾಳ ಪ್ರಾಥಮಿಕ ವೈರುಧ್ಯವಾಗುತ್ತದೆ.

ದಲಿತ ಚಳುವಳಿಗಳು ಇಂತಹ ಮುಖ್ಯವಾದ ವಿಚಾರಗಳನ್ನು ಪರಿಗಣಿಸಬೇಕು ಮತ್ತು ರಾಜಕೀಯ ಸಂವೃತ್ತಿ ಅವರನ್ನ ಯಾವ ರೀತಿ co-opt ಮಾಡಿತು ಸಂಕೇತಗಳನ್ನು ಯಾವ ರೀತಿ appropriate ಮಾಡುತ್ತಾ ಹೋಯಿತು. ಆಮೇಲೆ ಸಾಮಾಜಿಕ ಕಲಹಗಳನ್ನು ಬೆಳೆಸುತ್ತಾ ಹೋಯಿತು. ಇವುಗಳನ್ನೆಲ್ಲಾ ಪ್ರಶ್ನಿಸುವಂತಹ ಸಂದರ್ಭಗಳು ಇವತ್ತು ಇವೆ.

# ದಲಿತರ ದೃಷ್ಟಿಯಲ್ಲಿ ಮೀಸಲಾತಿ

*ಡಾ॥ ಅರವಿಂದ ಮಾಲಗತ್ತಿ*

ಪ್ರತಿಭೆ ಎನ್ನುವುದು ಕುಲ ಕಸುಬಗಳ ಜತೆಯಲ್ಲೇ ಇದೆ. ಈಗಿನ ಪ್ರತಿಭೆಯ ವ್ಯಾಖ್ಯಾನ ಇದನ್ನು ನಿರಾಕರಿಸುವ ಅಪವ್ಯಾಖ್ಯಾನ. ಈಗಿನ 'ಪ್ರತಿಭೆಯ ವ್ಯಾಖ್ಯಾನ– 'ವುರು ಹೊಡೆದು ಒಪ್ಪಿಸುವುದು' ಜೆರಾಕ್ಸ್ ಮಾಡಿಕೊಡುವಂತೆ. ಇನ್ನು ಹೆಚ್ಚಿನ ಪ್ರತಿಭೆಎಂದರೆ, ರುಂಡ, ಮುಂಡವನ್ನು ಬದಲಾಯಿಸಿ ಜೆರಾಕ್ಸ್ ತೆಗೆಯುವುದು. ಅನೀತಿ, ಕುಕೃತ್ಯಗಳನ್ನೇ ಪ್ರತಿಭೆ ಎಂದು ಪರಿಗಣಿಸಿದೆ. ಇದಕ್ಕೆ ಅನೇಕರು ಪ್ರತಿಕ್ರಿಯೆ ನೀಡಿದ್ದಾರೆ. ಇಂದಿನ ಮೀಸಲಾತಿಯ ಸಂದರ್ಭದಲ್ಲಿ ವೈದ್ಯರೂ ಇದನ್ನೇ ಮಾಡುತಿದ್ದಾರೆ. ಸಾಮಾಜಿಕ ಜವಾಬ್ದಾರಿಯೇ ಇಲ್ಲದ ಇವರು ಮನುಷ್ಯರ ಆರೋಗ್ಯವನ್ನು ಕಾಪಾಡುತ್ತಾರೆಯೆ ? ಇಂತಹ ಆಲೋಚನೆಯವರಿಂದ ಆರೋಗ್ಯಕರ ಸಮಾಜ ಕಟ್ಟಲು ಸಾಧ್ಯವೇ ? ಈ ಎಲ್ಲ ಪ್ರಶ್ನೆ ಮುಂದಿಟ್ಟುಕೊಂಡು ಆಲೋಚನೆ ಮಾಡಿದಾಗ ನಿಲ್ಲುವಂತಹ ವಿಚಾರ ಪ್ರತಿಭೆಗೂ ಹುದ್ದೆಗೂ ತಳುಕು ಹಾಕುತ್ತಿರುವುದು. ಇದರ ಜತೆಗೆ ಅಧಿಕಾರ ಮತ್ತು ಆದಾಯ ಪ್ರಧಾನಪಾತ್ರವನ್ನು ನಿರ್ವಹಿಸುತ್ತದೆ. ಅಧಿಕಾರ ಮತ್ತು ಆದಾಯ ಯಾವ ಹುದ್ದೆಗೆ ಇದೆಯೋ ಅದೇ ಉನ್ನತ ಹುದ್ದೆ ಎನ್ನುವ ಪರಿಕಲ್ಪನೆ ಇದೆ. ಪ್ರತಿಭೆ ಇದ್ದರೆ ಮಾತ್ರ ಈ ಉನ್ನತ ಹುದ್ದೆ/ಉನ್ನತ ಶಿಕ್ಷಣ ಇಲ್ಲವೆಂದರೆ ಇಲ್ಲ. ಓದು ಬರಹದಿಂದ ಕಲಿತ ಪ್ರತಿಭೆಯೇ 'ಪ್ರತಿಭೆ' ಎನ್ನುವ ಆಲೋಚನಾ ಕ್ರಮ–ಅಧಿಕಾರ ಮತ್ತು ಆದಾಯವನ್ನು ಸಂಕೇತಿಸುತ್ತದೆ. ಸಮಾನ ವೇತನ ನೀತಿಯನ್ನು ತರುವುದರಿಂದ ಹುದ್ದೆಗಳಲ್ಲಿ ತಾರತಮ್ಯ ತನ್ನ ತಾನೆ ಕಳೆದು ಹೋಗುತ್ತದೆ ಎನ್ನುವ ವಿಚಾರ ಹೊಸದಾದರೂ ಅದೇ ಇಂದು ಹೆಚ್ಚು ಪ್ರಸ್ತುತ. ಒಬ್ಬ ಪ್ರಥಮ ದರ್ಜೆ ಅಧಿಕಾರಿಗೆ ಇರುವ ವೇತನ ಒಬ್ಬ ಜಲಗಾರನ ಸಂಬಳಕ್ಕಿಂತ ಹೆಚ್ಚು ಇರುವವರೆಗೆ, ಈ ಹುದ್ದೆಗಳ ಬಗ್ಗೆ ಪ್ರತಿಭೆಗಳ ಬಗ್ಗೆ ಚರ್ಚೆಗಳು ನಡೆದೇ ಇರುತ್ತವೆ. ಚಮ್ಮಾರ, ನೇಕಾರ, ಒಕ್ಕಲಿಗ ಪ್ರತಿಯೊಬ್ಬರಿಗೂ ಅವರದ್ದೇ ಪ್ರತಿಭೆ ಇದೆ. ಪ್ರತಿಭೆ ಇಲ್ಲದೆ ಯಾವುದೇ ಕೆಲಸ ಮಾಡಲು ಸಾಧ್ಯವಿಲ್ಲ. ಸೃಜನ ಶೀಲತೆಗೆ ಪ್ರತಿಭೆ ಅನಿವಾರ್ಯ ಎನ್ನುವುದನ್ನು ಪಂಡಿತರು ಗುರುತಿಸಲು ಆರಂಭ ಮಾಡುತ್ತಾರೆ. ಆಕಾರಣದಿಂದ ಇಂತಹ ಜನಕ್ಕೆ ಸಮಾನ ವೇತನದ ಪರಿಕಲ್ಪನೆಯ ವಾದವನ್ನು ಮುಂದೊಡ್ಡುವುದು ಅತ್ಯಂತ ಸೂಕ್ತ.

ಇದಕ್ಕೆ ಪೂರಕವಾಗಿ ಸೇರಿಸಬಹುದಾದ ಮಾತು "ಮೀಸಲಾತಿ ಎನ್ನವುದು ಸಕ್ರಮ ಹಂಚಿಕೆಯ ಒಂದು ವಿಧಾನ" ಮೀಸಲಾತಿಯಿಂದಲೇ ತರತಮ ಭಾವನೆ, ಸಾಮಾಜಿಕ ವೈಪರೀತ್ಯ ಎನ್ನುವವರಿಗೆ ಹೇಳಬೇಕು– ಭಾರತೀಯ ವ್ಯವಸ್ಥೆಯಲ್ಲಿ ಎಷ್ಟು ಹುದ್ದೆ ಗಳಿವೆಯೋ ಅವನ್ನ ಆಯಾ ಸಮುದಾಯದ ನೆಲೆಗಳಲ್ಲಿ ಜನಸಂಖ್ಯೆಗೆ ಅನುಗುಣವಾಗಿ ಒಡೆದು ಹಾಕಿಬಿಡಿ. ಏಕೆಂದರೆ ಮೇಲ್ಜಾತಿಯವರು ಮೇಲಿನ ಹುದ್ದೆಗಳು, ಕೆಳಜಾತಿಯವರು ಕೆಳಗಿನ ಹುದ್ದೆಗಳು ಎಂಬ ತರತಮ ಭಾವ ಹೊರಟುಹೋಗುತ್ತದೆ. ಮೇಲ್ಜಾತಿಯವರು ಕೆಳಗಿನ ಹುದ್ದೆಗಳನ್ನು ಮಾಡುವ ಅನಿವಾರ್ಯತೆ ಸೃಷ್ಟಿಯಾಗುತ್ತದೆ. ಕೆಲವರು ಹೇಳುತ್ತಾರೆ 'ಯಾವುದೋ ತಲೆಮಾರಿನಲ್ಲಿ ದಲಿತರಿಗಾದ ಶೋಷಣೆಯನ್ನು ಇವತ್ತಿನ ತಲೆಮಾರಿನವರ ಮೇಲೆ ಏಕೆ ಹೇರಬೇಕು?' ಎಂದು. ಮೀಸಲಾತಿ ಇರುವುದು ಯಾವುದೋ ಶತಮಾನದ ಅನ್ಯಾಯವನ್ನು ಸರಿಪಡಿಸುವುದಕ್ಕಲ್ಲ. ವರ್ತಮಾನದ ಅನ್ಯಾಯವನ್ನು ಸರಿಪಡಿಸುವುದಕ್ಕೆ.

ಭೂತದ ಘಟನೆಗಳು ಭವಿಷ್ಯದಲ್ಲಿ ನಡೆಯದಿರಲಿ ಎನ್ನುವುದಕ್ಕೆ. ಭೂತದ ಹಳೆಯ ಹಕಳೆಗಳನ್ನು ಕಿತ್ತು ಹೊಸ ಗಾಯ ಮಾಡಲು ಅಲ್ಲ. ಈ ಕಾರಣಕ್ಕಾಗಿ ಯಾವುದೇ ಉದ್ಯೋಗ ವಿರಲಿ ಜಾತಿವಾರು ಜನಸಂಖ್ಯೆ ಆಧಾರದ ಮೇಲೆ ವರ್ಗೀಕರಿಸಿ ಕೊಟ್ಟಿದ್ದೇ ಆದರೆ ಹುದ್ದೆಗಳ ಕುರಿತ ಭಿನ್ನಾಭಿಪ್ರಾಯಗಳು ಕಡಿಮೆಯಾಗಲು ಸಾಧ್ಯ.

ಸ್ವಾತಂತ್ರ್ಯ ಬಂದು ಇಷ್ಟು ವರ್ಷವಾದರೂ ಮೀಸಲಾತಿ ಯಾಕೆ ಯಶಸ್ವಿಯಾಗಿಲ್ಲ? ಅಥವಾ ಆಗಿದೆಯೆ? ಆಗಿದ್ರೆ ಯಾಕೆ ಮುಂದುವರೆಸುತ್ತಿದ್ದೇವೆ? ಇಂತಹ ಪ್ರಶ್ನೆಗಳು ಎದುರಾದಾಗ ಎಲ್ಲ ಹೇಳುವ ಮಾತು ಮೀಸಲಾತಿ ರಾಜಕೀಯ ದಾಳವಾಗಿದೆ ಎಂದು. ಇಲ್ಲಿ ಸತ್ಯಾಂಶವಿದೆ. ಆದರೆ ನೂರಕ್ಕೆ ನೂರು ಸತ್ಯವಲ್ಲ. ಇದನ್ನು ದಲಿತರು ಗಮನದಲ್ಲಿ ಇಟ್ಟುಕೊಳ್ಳಬೇಕು.

ನಾವು ರಾಜಕೀಯ ಕ್ಷೇತ್ರಕ್ಕೆ ಒತ್ತು ಕೊಟ್ಟಿದ್ದೇವೆ ಧಾರ್ಮಿಕ ಕ್ಷೇತ್ರಕ್ಕಲ್ಲ. ಮತಾಂತರ ಪ್ರಕ್ರಿಯೆ ಬಂದಾಗಲೆಲ್ಲ, ಮೀಸಲಾತಿ ಎದ್ದು ನಿಲ್ಲುತ್ತದೆ. ಈ ಅಸ್ತ್ರವನ್ನು ರಾಜಕೀಯವಾಗಿ ಪ್ರಯೋಗ ಮಾಡುವಾಗ ಹೆಚ್ಚಿನ ಜನ ಮೀಸಲಾತಿ ಒಪ್ಪಿಕೊಳ್ಳುವುದಕ್ಕೆ ಕಾರಣ ಎಲ್ಲ ದಲಿತರೂ ಮತಾಂತರವಾಗಿ ಬೇರೆ ಧರ್ಮಕ್ಕೆ ಹೊರಟುಹೋಗುತ್ತಾರೋ ಎನ್ನುವ ಭಯ.

ಕೇರಳ ಮತ್ತು ಉತ್ತರ ಕರ್ನಾಟಕಕ್ಕೆ ಹೋದರೆ 'ಕ್ರೈಸ್ತರಿಗೆ ಮೀಸಲಾತಿ' ಎನ್ನುವ ಆಂದೋಲನವೇ ನಡೆದಿದೆ. ಇದನ್ನು ಸೂಕ್ಷ್ಮವಾಗಿ ಬಿಡಿಸುತ್ತಾ ಹೋದರೆ ಅದರಲ್ಲಿ ದಲಿತರು ಬರೀ ಮುಖವಾಣಿ. ಹಿಂದೆ ಬೇರೇ ಶಕ್ತಿಗಳೇ ಇವೆ. ನಾನು ಅವರ ಮೂರು ದಿನದ ಶಿಬಿರದಲ್ಲಿ ಭಾಗವಹಿಸಿದ್ದೆ. ಅಲ್ಲಿನ ಎಲ್ಲ ಫಾದರ್‌ಗಳೂ ಮಂಡಿಸುವ ವಾದ 'ಮೀಸಲಾತಿ ಯಿಂದಲೇ ಧರ್ಮ ಹಾಳಾಗುತ್ತಿದೆ, ಕ್ರೈಸ್ತ ಧರ್ಮಕ್ಕೂ ಮೀಸಲಾತಿ ಕೊಡಿ ಇಲ್ಲವೇ ಮೀಸಲಾತಿಯನ್ನು ಬೇರು ಸಹಿತ ಕಿತ್ತುಹಾಕಿ' ಎಂದು. ಎಲ್ಲರೂ ಬೌದ್ಧಧರ್ಮಕ್ಕೆ ಮತಾಂತರ ಹೊಂದುತ್ತಿದ್ದಾರೆ. ಕಾರಣವೇನು? ಅಲ್ಲಿ ಮೀಸಲಾತಿ ಸಂರಕ್ಷಣೆ ಇದೆ. ಒಂದು ವೇಳೆ ಕ್ರೈಸ್ತ ಧರ್ಮಕ್ಕೂ ಮೀಸಲಾತಿ ಇದ್ದರೆ ಹೆಚ್ಚು ಜನ ಅಲ್ಲಿಗೇ ಹೋಗುತ್ತಾರೆ. ಅದಕ್ಕೇ ಕ್ರೈಸ್ತ ಮೀಸಲಾತೀ ಆಂದೋಲನ. ಅಂದರೆ ರಾಜಕೀಯ ವಿಷಯಕ್ಕಿದ್ದಂತೆ ಧರ್ಮದ ಆಲೋಚನೆಗೂ ಮೀಸಲಾತಿ ಒಂದು ದಾಳ.

ಮೀಸಲಾತಿ ಪ್ರತಿಭೆಯನ್ನು ಹತ್ತಿಕ್ಕುತ್ತದೆ ಎನ್ನಲಾಗುತ್ತದೆ. ಪೇಮೆಂಟ ಸೀಟುಗಳಿಂದ ಪ್ರತಿಭೆಗೆ ಧಕ್ಕೆಯಾಗುವುದಿಲ್ಲವೇ? ಡೊನೇಷನ್ ಹಾವಳಿ ಅಪರಾಧೀ ಪ್ರಜ್ಞೆ ಉಂಟು ಮಾಡದಿರುವುದೇ ಆಶ್ಚರ್ಯದ ಸಂಗತಿ. ನಾವು ಹೆಣಕೊಳೆತು ಹೋದಮೇಲೇ ಅದನ್ನು ತೆಗೆದು 'ಹೀಗೆ ಸತ್ತರು' ಎಂದು ಹುಡುಕಲು ಶುರು ಮಾಡುತ್ತೇವೆ. ವರದಕ್ಷಿಣೆ ಸಾಮಾಜಿಕ ಪಿಡುಗು ಎಂದಂತೆ ಡೊನೇಷನ್ ಪರಿಕಲ್ಪನೆ ಸಾಮಾಜಿಕ ಪಿಡುಗು ಎಂದು ಆಂದೋಲನ ಏಳುವ ಹಂತ ತಲುಪಿದಾಗ ಸಮರ್ಥವಾದ ರೂಪ ಸಿಗುತ್ತದೆ. ಕಡಿಮೆ ಅಂಕಗಳಿದ್ದಾಗ ಹೆಚ್ಚು ಹಣಕೊಟ್ಟರೆ ಪ್ರವೇಶ ಎನ್ನುವುದೂ ಮೀಸಲಾತಿಯೇ. ಮೀಸಲಾತಿ ಎನ್ನುವಂತಹ ಶಬ್ದದ ಪರಿಭಾಷೆ ಬದಲಾಗುವ ಅಥವಾ ಅದನ್ನು ಒಡೆದು ಕಟ್ಟುವ ಅಗತ್ಯ ಇದೆ. ಮೀಸಲಾತಿ ಎನ್ನುವ ಶಬ್ದವನ್ನು ಎಲ್ಲಿಯವರೆಗೆ ಸಾಮಾನ್ಯೀಕರಣಕ್ಕೆ ಒಳಗು ಮಾಡುವುದಿಲ್ಲವೋ ಅಲ್ಲಿಯವರೆಗೆ ಅಪಕಲ್ಪನೆ ಹೋಗಲು ಸಾಧ್ಯವಿಲ್ಲ. ಅದಕ್ಕೇ ಮೀಸಲಾತಿ ವ್ಯಾಪ್ತಿಯಲ್ಲಿ ಪೇಮೆಂಟ್ ಸೀಟೂ ಬರಬೇಕು. ಒಂದು ದೊಡ್ಡ ಪ್ರಮಾದವೆಂದರೆ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಯಲ್ಲಿ ಏನೆಲ್ಲ ಬದಲಾವಣೆಗಳಾದರೂ ತಾನದನ್ನು ನೋಡಿಯೂ ನೋಡದಂತೆ ಕಣ್ಣುಮುಚ್ಚಿಕೊಳ್ಳುತ್ತಾರೆ.

ಸಾಮಾಜಿಕ ವ್ಯವಸ್ಥೆಯನ್ನು ಗಮನದಲ್ಲಿಟ್ಟುಕೊಂಡು ಮೀಸಲಾತಿಯನ್ನು ಆಯಾ

ವರ್ಗಕ್ಕೆ ಸಂಬಂಧಪಟ್ಟವರೆ ಬಳಸಿಕೊಂಡರೆ ವ್ಯವಸ್ಥೆ ಸರಿಹೋಗುತ್ತದೆ. ಆದರೆ ಈ ಖೋಟಾ ಜಾತಿ ಪತ್ರಗಳ ಹಾವಳಿ ಮೀಸಲಾತಿ ಸತ್ವವನ್ನು ಕಳೆದುಹಾಕಲು ಕಾರಣವಾಗಿದೆ. ಭ್ರಷ್ಟಾಚಾರ ಮೀಸಲಾತಿ ಪಾವಿತ್ರತೆ ಹಾಳಾಗಲು ಮೂಲ ಕಾರಣಗಳಲ್ಲಿ ಒಂದು.

ಮಾಧ್ಯಮಗಳು ಇಂದು ಮೀಸಲಾತಿ ವಿರುದ್ಧ ಧ್ವನಿ ಎತ್ತುವ ಕೆಲಸಮಾಡುತ್ತಿವೆ. ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ಮರೆಯುತ್ತಿವೆ. ಅವರು ಹೇಳಿದ ಹಾಗೆ ಕೇಳುವ ಸ್ವರೂಪ ನಿರ್ಮಾಣ ಮಾಡುತ್ತಿವೆ. ತಾವು ಬದುಕುವುದಕ್ಕಾಗಿ ಸಮಾಜವನ್ನು ಒಡೆದು ಆಳುವ ನೀತಿ ಆರಂಭಮಾಡಿವೆ. ಎಡಿಷನ್ ಮೇಲೆ ಎಡಿಷನ್‌ಗಳು, ಈ ಕಡೆ ಸುದ್ದಿ ಆ ಕಡೆಗಿಲ್ಲ, ಆಕಡೆ ಸುದ್ದಿ ಈ ಕಡೆಗಿಲ್ಲ. ಇವೆಲ್ಲ ಸಾಮಾಜಿಕ ಜವಾಬ್ದಾರಿ ಇಲ್ಲ ಎನ್ನುವುದಕ್ಕೆ ಸಂಕೇತಗಳು. ವಿದೇಶ ಪತ್ರಿಕೆಗಳು ಭಾರತದಲ್ಲಿ ಬರಲು ಅವಕಾಶ ಕೊಟ್ಟಿಲ್ಲ ಇದಕ್ಕೆ ಕಾರಣ ಕೊಡುವುದು 'ಮಾಧ್ಯಮಗಳು ಈ ದೇಶದ ಬೌದ್ಧಿಕ ಶಕ್ತಿ' ಇವು ದೇಶದ ಸಾಮರ್ಥ್ಯ ಪ್ರತಿಬಿಂಬಿಸುತ್ತವೆ. ಈ ಕ್ಷೇತ್ರಕ್ಕೆ ವಿದೇಶೀ ಮಾಧ್ಯಮಗಳು ಧುಮುಕುವುದೆಂದರೆ ದೇಶದ ಅಸ್ತಿತ್ವವನ್ನು ಹಾಳುಗೆಡುವುದು ಎಂದು ಬಿಂಬಿಸಲಾಗುತ್ತಿದೆ. ನವೋದಯ ಕಾಲಕ್ಕೆ ಈ ವ್ಯಾಖ್ಯಾನ ಅರ್ಥಪೂರ್ಣವಾಗಿತ್ತೇ ವಿನಃ ಈವತ್ತಿಗಲ್ಲ. ಅವು ಸಮಾಜದ ದೇಶದ ಬೌದ್ಧಿಕ ಶಕ್ತಿಯಾಗಿ ಕೆಲಸಮಾಡುತ್ತಿಲ್ಲ. ಜಾಗತೀಕರಣದ ಸಂದರ್ಭದಲ್ಲಿ ವಿದೇಶೀ ಪತ್ರಿಕೆಗಳೂ ಬಂದಿದ್ದರೆ ವಸ್ತುನಿಷ್ಠ ವರದಿಗಳು ಚಿಂತನೆಗಳಿಗೆ ಆಸ್ಪದವಿರುತ್ತಿತ್ತು. ಈ ಕಾರಣಗಳಿಂದಾಗಿ ಈ ಮಾಧ್ಯಮಗಳೂ ಜಾಗತೀ ಕರಣದ ವ್ಯಾಪ್ತಿಗೆ ಬರುವ ಅಗತ್ಯ ಇದೆ.

ವಿಷಯ ಪ್ರಸ್ತಾಪಿಸಲು ಅವಕಾಶ ಕೊಟ್ಟ ಸಮುದಾಯದವರಿಗೆ ಧನ್ಯವಾದಗಳು.

## ಪ್ರಶ್ನೋತ್ತರ

**ವರ್ಣ-ಜಾತಿ ಧರ್ಮಗಳಲ್ಲಿ ಬದಲಾವಣೆಗಳಾಗಿಲ್ಲವೇ ?** *– ರಂಗಾರೆಡ್ಡಿ*

ಬೇರೆ ಬೇರೆ ರೀತಿಯಲ್ಲಾಗಿದೆ. ಜಾತಿ ಧರ್ಮದ ಮರಿ. ಧರ್ಮ-ಧರ್ಮಗಳಲ್ಲಿಯೇ ಮೇಲು-ಕೀಳು ಭಾವನೆ ಇದೆ. ಜಾತಿಗೇ ಏಕೆ ಪ್ರಾಮುಖ್ಯತೆ ಎಂದರೆ ಅದು ಜನಜೀವನದ ಒಟ್ಟಿಗೆ ದಿನನಿತ್ಯದ ಆಗುಹೋಗುಗಳೊಟ್ಟಿಗೆ ನಿಖರವಾದ ಸಂಬಂಧ ಪಡೆದಿದೆ. ..ಒಂದು ಕಾಲಘಟ್ಟದಲ್ಲಿ ವರ್ಣ ಮಹತ್ವಪಡೆದಿತ್ತು. ಎಲ್ಲಿ ಧರ್ಮಕ್ಕೆ ಮಹತ್ವವೋ ಅಲ್ಲಿ ವರ್ಣಕ್ಕೆ ಮಹತ್ವವಿಲ್ಲ. ವರ್ಣಕ್ಕೆ ಮಹತ್ವ ಬಂದಾಗ ಧರ್ಮ-ಜಾತಿಗೆ ಮಹತ್ವವಿಲ್ಲ. ಜಾತಿಗೆ ಮಹತ್ವ ಬಂದಾಗ ಧರ್ಮ & ವರ್ಣ ಗೌಣವಾಗುತ್ತವೆ.

ಮೈಸೂರು ಒಡೆಯರಿಗಿಂತ ಮುಂಚೆ ಮನುಧರ್ಮಶಾಸ್ತ್ರ ಯಾರು ಯಾರು ಏನೇನು ಕೆಲಸಮಾಡಬೇಕೆಂದು ಮೀಸಲಾತಿ ಕಾನೂನು ಮಾಡಿತ್ತು. ಅದು ಅಸಮಾನತೆ ಪ್ರತೀಕವೆಂದು ಅಂಬೇಡ್ಕರ್ ಅದನ್ನು ಸುಟ್ಟುಹಾಕಿದ್ದು. ಇದು ಬ್ರಿಟೀಷರ ನಂತರ ಬಂದದ್ದಲ್ಲ ಮನುಕಾಲ ದಿಂದಲೂ ಇದ್ದದ್ದೇ.

ಜಾಗತೀಕರಣದ ಹಿನ್ನೆಲೆಯಲ್ಲಿ ಆರ್ಥಿಕ ವ್ಯವಸ್ಥೆ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಬದಲಾವಣೆಗಳೂ ಸಾಮಾಜಿಕ ವ್ಯವಸ್ಥೆ ತಿದ್ದುವ ನೀತಿ ನಿಯಮಗಳೂ ಅನಿವಾರ್ಯ.

**ಮೀಸಲಾತಿ ಮುಂದುವರೆಯಬೇಕೆ ? ಬೇಡವೆ ? ಮೀಸಲಾತಿ ಇದ್ದರೆ ಅದಕ್ಕೆ ಕಾಲ ನಿಗದಿಗೊಳಿಸಲು ಸಾಧ್ಯವೇ ?** *–ಟಿ.ಜನಾರ್ಧನ*

ಮಲಗಿದವನಿಗೆ ಕೈತುತ್ತು ಹಾಕ್ತೀನೀಂದರೆ ಬಾ ಹಾಕು ಅಂತಾನೆ. ಆದರೆ ಮೀಸಲಾತಿ ಪಡೆದ ವರ್ಗ ಸಿಂಬಳ ತೆಗೆದು ಬಿಸಾಡೋ ಹಾಗೆ ಬಿಸಾಡೋಕ್ಕೆ ಸಾಧ್ಯ. ಅದು ಯಾವಾಗ ಬರುತ್ತಂದರೆ, ಸಾಮಾಜಿಕ ಆರ್ಥಿಕ ಬದಲಾವಣೆಗಳು ಬಂದಾಗ ಅಂಬೇಡ್ಕರ್ ಹೇಳಿದರು-

'ಒಂದು ವ್ಯಕ್ತಿ ಒಂದು ಮತ ಎನ್ನುವ ಹಿನ್ನೆಲೆಯಲ್ಲಿ ರಾಜಕೀಯ ಸಮಾನತೆ ಪ್ರಾಪ್ತವಾಗುತ್ತಿದೆ. ಆದರೆ ಆರ್ಥಿಕ, ಸಾಮಾಜಿಕ ಸಮಾನತೆ ಬಾರದಿದ್ದರೆ, ಪ್ರಜಾಪ್ರಭುತ್ವದ ವಿರುದ್ಧವೇ ಜನ ಬಂಡೇಳುತ್ತದೆ.' ಇದಕ್ಕೇ ಮೀಸಲಾತಿ ಅನಿವಾರ್ಯ. ಅದು ಎಲ್ಲಿಯವರೆಗೆಂದರೆ ಸಾಮಾಜಿಕ ಆರ್ಥಿಕ ಬದಲಾವಣೆ ಬರುವವರೆಗೆ.

ಆರ್ಥಿಕ ಸಮಾನತೆ ಬರಲು, ಸಾಮೂಹಿಕ ಕೃಷಿ ಸಹಕಾರೀ ಕೃಷಿ ಮತ್ತು ಕೈಗಾರಿಕೆಗೆ ಸಂಬಂಧಿಸಿದಂತೆ ರಾಜ್ಯದ ಹಿಡಿತ ಇರಬೇಕು. ಸಹಕಾರಿ ಮತ್ತು ಸರಕಾರೀ ವ್ಯವಸ್ಥೆ ಸಮ್ಮಿಲನಗೊಂಡು ಕೆಲಸ ಮಾಡಬೇಕು. ಈ ಮಾತೃ ಹೃದಯವನ್ನು ಸಂವಿಧಾನ ಒಳಗೊಂಡಿದೆ. ಜಾಗತೀಕರಣ ಈ ಮಾತೃಹೃದಯವನ್ನೇ ಕಿತ್ತುಹಾಕುವ ಕೆಲಸ ಮಾಡುತ್ತಿದೆ... ಈ ಸಂಸ್ಥೆಗಳು ಭಾರತೀಯ ಸಂವಿಧಾನಕ್ಕೆ ಹೊರತಲ್ಲವೆ ?

ಇನ್ಫೋಸಿಸ್ ನಾರಾಯಣಮೂರ್ತಿ 'ಸರಕಾರೀ ವ್ಯವಸ್ಥೆ ದಕ್ಷತೆಯಿಂದ ಕೆಲಸ ಮಾಡಬೇಕೆನ್ನುವುದಾದರೆ ಮೀಸಲಾತಿ ತೆಗೆದುಹಾಕಬೇಕು' ಎಂದರು. ಒಳ್ಳೆ ಸಲಹೆ. ಆದರೆ ಇವರಿಗೆ ಮೀಸಲಾತಿ ತೆಗೆದುಹಾಕಬೇಕೆಂದು ಹೊಳೆದ ಹಾಗೆ ಜಾತಿವ್ಯವಸ್ಥೆ ಕಿತ್ತು ಹಾಕಬೇಕು ಎಂದು ಏಕೆ ಹೊಳೆಯುವುದಿಲ್ಲ ?

ಜಾತಿ ಇದ್ದರೆ ತರತಮ ಭಾವ. ಜಾತಿ ವ್ಯವಸ್ಥೆಯೊಂದಿಗೆ ಕುಲ ಕಸುಬುಗಳು ತಾವೇ ಮುಂದುವರೆದುಕೊಂಡು ಬರುತ್ತವೆ.

ಇದನ್ನು ಕಿತ್ತುಹಾಕಬೇಕೆಂದು ಖಾಸಗಿ ವ್ಯವಸ್ಥೆಯ ಚಿಂತಕರಿಗೆ ಎಲ್ಲಿಯವರೆಗೆ ಮನಸ್ಸು ಬರುವುದಿಲ್ಲವೋ ಅಲ್ಲಿಯವರೆಗೆ ಅದು ಹೋಗುವುದಿಲ್ಲ. ಇನ್ನೊಂದು, ಈ ಸಂಸ್ಥೆಗಳು ರಾಜ್ಯದ/ದೇಶದ ಸಂಪನ್ಮೂಲ ಹೊರತುಪಡಿಸಿ ಕೆಲಸ ಮಾಡುತ್ತಿಲ್ಲ. ಖಾಸಗಿಯವರು ಸ್ವತಂತ್ರರು ಎಂದು ಹೇಳಿಕೊಳ್ಳುತ್ತಾರೆ. ಇವರು ಹೇಗೆ ಸ್ವತಂತ್ರರು ? 'ಸರಕಾರದ ಅಧೀನತೆಯಿಂದ ಹೊರಗುಳಿದದ್ದು ಮಾತ್ರ ಸ್ವತಂತ್ರ.' ಸಂವಿಧಾನ ವ್ಯಾಪ್ತಿಯನ್ನು ಗುರುತಿಸಿಕೊಳ್ಳದ ರಾಜಕಾರಣಿಗಳ ಸಂತಾನ ಇರುವುದರಿಂದ ಹೀಗಾಗುತ್ತಿದೆ. ಅವರು ಖಾಸಗಿ ಉದ್ಯಮಿಗಳನ್ನು ನೀವೇ ನಮ್ಮ ದೊರೆಗಳು ಎಂದು ಭಾವಿಸಿ ವ್ಯವಹರಿಸುತ್ತಿದ್ದಾರೆ. ಅದಕ್ಕವರು ರಸ್ತೆ ಸರಿಯಿಲ್ಲ, ವಿದ್ಯುತ್ ಇಲ್ಲ ಎಂದು ಏಗರುತ್ತಾರೆ. ಸ್ವತಂತ್ರರಿಗೆ ಇದನ್ನು ಕೇಳುವ ಹಕ್ಕಿದೆಯೆ ?

ದಲಿತರಲ್ಲಿಯೇ ಒಂದು ಕೆಳಪದರಿನ ವರ್ಗವಿದೆ. ಇದನ್ನು ನಾನು ನೊರೆ ಪದರು ಎನ್ನಲು ಇಷ್ಟಪಡುತ್ತೇನೆ. ..ಜಾತಿ ಎಲ್ಲಿ ಹೋದರು ಬೆನ್ನು ಬಿಡುವಂತಹುದಲ್ಲ. ..ಕೆಳ ಪದರನ್ನು ನೊರೆ ಪದರೆಂದು ಗುರುತಿಸುವ ಅಗತ್ಯವಿದೆ. ಏಕೆಂದರೆ ಮಧ್ಯಮ ವರ್ಗದ ರೂಪಕ ಅದು.

ಪ್ರಶ್ನೆ– ಸ್ಪಷ್ಟತೆ ಇಲ್ಲ.

ಉಂಡ ದಲಿತರು ಉಣದಿರುವ ದಲಿತರಿಗೆ ಬಿಟ್ಟುಕೊಡಬೇಕೆಂದು ನಾ ಹೇಳಿದಾಗ ನನ್ನನ್ನು ಮೀಸಲಾತಿ ವಿರೋಧಿ ಎಂದು ಪ್ರತಿಭಟಿಸಿದ್ದರು. .. ಇಂದು ಒಳಮೀಸಲಾತಿ ಪರಿಕಲ್ಪನೆ ಹೆಚ್ಚು ಕೇಳಿಬರುತ್ತಿದೆ. ಇದರ ಅಗತ್ಯ ಇದೆ ಅಂತಲೇ ನಾನು ಹೇಳುತ್ತೇನೆ. ಮೀಸಲಾತಿಯಲ್ಲಿ ಉಂಡವರೂ ಇದ್ದಾರೆ ಆದಾಗ್ಯೂ ಅಲ್ಲ ಹೇಗಿದೆ ಎಂದು ಜಾತೀ+ ಆದಾಯದ ಮೂಲಕ ಪರಿಗಣಿಸಬೇಕು.

# ಅಸ್ಪೃಶ್ಯತೆ ನಿವಾರಣೆಯಲ್ಲಿ ಪ್ರಗತಿಪರ ಚಳುವಳಿಗಳು

*ಪ್ರೊ॥ ಗೋವಿಂದಯ್ಯ*

ಒಂದು ಕಾಲದಲ್ಲಿ ಮೂಲ ಭೂತವಾದಿಗಳಲ್ಲಿ ಬಿ.ಜೆ.ಪಿ. ಕಮ್ಯುನಿಸ್ಟರಿಬ್ಬರನ್ನೂ ಸೇರಿಸುವ ಪರಿಪಾಠವಿತ್ತು. ಅದನ್ನು ಮುಕ್ತವಾಗಿ ಸ್ವೀಕರಿಸಿ ಅದನ್ನು ತಿರಸ್ಕರಿಸಬೇಕು ಎಂದು ಹೇಳುತ್ತಿದ್ದೇನೆ. ಒಂದು ಕಾಲದಲ್ಲಿ ಮಡಿವಂತ ಕಮ್ಯೂನಿಷ್ಟರು ಮೀಸಲಾತಿ ಪರವಾಗಿರಲಿಲ್ಲ. ಅಸ್ಪೃಶ್ಯತೆಯನ್ನು ಚರ್ಚೆಮಾಡಲು ಸಿದ್ಧವಿರಲಿಲ್ಲ. ಸಮುದಾಯ ಈ ಚಿಂತನಾ ಶಿಬಿರ ನಡೆಸುತ್ತಿರುವುದು ಅಭಿನಂದನಾರ್ಹ.

ಕ್ರಿಟಿಕಲ್ ಆಗಿ ನೋಡಿದರೆ ಬಹುಶಃ ಅಸ್ಪೃಶ್ಯತೆ ನಿವಾರಣೆಯಲ್ಲಿ ಪ್ರಗತಿಪರ ಚಳವಳಿಗಳು ಸಫಲವಾಗಿಲ್ಲ. ಏಕೆಂದರೆ ಅವುಗಳಿಗೆ ಅಸ್ಪೃಶ್ಯತೆ ಮುಖ್ಯವಾದ ಚಿಂತನೆ, ತಾತ್ವಕ ವಿಷಯ ಎಂದು ಕಾಡಿಲ್ಲ. ಕ್ರಿಟಿಕಲ್ ಆಗಿ ನೋಡದೆ ವಿನಾಯಿತಿ ಕೊಟ್ಟು ನೋಡಿದರೆ ದಲಿತ ಚಳವಳಿ, ಸಮುದಾಯದಂತಹ ಚಳವಳಿ ಪ್ರತ್ಯಕ್ಷವೋ, ಪರೋಕ್ಷವೋ ಆಗಿ ಇದನ್ನು ಪರಿಗಣಿಸದೇ ಇಲ್ಲ. ಆದರೆ ಇದು ಆದ್ಯ ಪ್ರಶ್ನೆ ಆಗಬೇಕಿತ್ತು. ಕಾರಣ, ಅಸ್ಪೃಶ್ಯತೆ ಬರಿಯ ದಲಿತರಿಗೆ ಸಂಬಂಧಪಟ್ಟ ವಿಷಯವಲ್ಲ. ಹಾಗೆ ತಿಳಿದರೆ ನಾವು ಮೂರ್ಖರಾಗುತ್ತೇವೆ, ಆಗಿದ್ದೇವೆ ಎಂದು ನನ್ನ ಭಾವನೆ. ಅಸ್ಪೃಶ್ಯತೆ ಹೊಲೆಮಾದಿಗರಿಗೆ ಸಂಬಂಧಿಸಿದ ವಿಷಯ, ದಬ್ಬಾಳಿಕೆ ಲಿಂಗಾಯತ, ಒಕ್ಕಲಿಗರಿಗೆ ಸಂಬಂಧಿಸಿದ ವಿಷಯ, ವೇದ ಪುರಾಣ ಬ್ರಾಹ್ಮಣನಿಗೆ ಸಂಬಂಧಿಸಿದ ವಿಷಯ ಎನ್ನುವ ಸರಳೀಕರಣವೇ ನಮ್ಮನ್ನು ನಮ್ಮೆಲ್ಲ ಪ್ರಗತಿಪರ ಚಳವಳಿಗಳನ್ನು ದಿಕ್ಕು ತಪ್ಪಿಸುತ್ತಿದೆ... ಅಸ್ಪೃಶ್ಯತೆ ಎನ್ನುವುದು ಒಂದು ಸಮಗ್ರತೆಯ ಪ್ರಶ್ನೆ. ಇದು ನಮ್ಮ ಭಾರತೀಯ ಸಮಾಜವನ್ನು 'ಒಂದು ಸಮಾಜ' ಎಂದು ತಿಳಿಯುವುದಾದರೆ. ಬಾಯಿಂದ ಬ್ರಾಹ್ಮಣ, ಭುಜದಿಂದ ಕ್ಷತ್ರಿಯ, ಸೊಂಟದಿಂದ ವೈಶ್ಯ, ಪಾದದಿಂದ ಶೂದ್ರ ಎನ್ನುವಂತಹದನ್ನು ಗಂಭೀರವಾಗಿ ಪರಿಗಣಿಸಿದ್ದೇನೆ. ಕಾಲಿಗೆ ಮುಳ್ಳು ಚುಚ್ಚಿದಾಗ ಕಾಲಿಗೆ ತಾನೆ ಚುಚ್ಚಿದ್ದು ಎಂದು ತಲೆ ತೀರ್ಮಾನಿಸಿದರೆ ನಿದ್ದೆ ಮಾಡಲು ಸಾಧ್ಯವೆ ? ಆ ಕಾಲಲ್ಲಿ ಕೀವು ಬಂದಾಗ ಬೇರೆ ಭಾಗಗಳು ಅದು ನನಗೆ ಸಂಬಂಧಿಸಿದ್ದಲ್ಲ ಎಂದು ತಿಳಿಯಬಹುದೆ ? ಭುಜಕ್ಕೆ ಬಾಣ ತಗುಲಿ ರಕ್ತ ಹರಿದಾಗ ಕಾಲು ತನಗೆ ಸಂಬಂಧಪಟ್ಟಿಲ್ಲವೆಂದು ಓಡದಿರಲು ಸಾಧ್ಯವೆ ? ಇಡೀ ದೇಹ ಒಂದು ಸಿಂಗಲ್ ಯೂನಿಟ್. ಯಾವುದೇ ಭಾಗಕ್ಕೆ ತೊಂದರೆಯಾದರೆ ಅದು ಇಡೀ ದೇಹಕ್ಕೆ ಸಂಬಂಧಿಸಿದ ನೋವು, ದುಃಖ, ಖಾಯಿಲೆ. ಹೀಗೆ ಸಮಾಜವೆಂಬ ದೇಹಕ್ಕೆ ಅಸ್ಪೃಶ್ಯತೆ ರೋಗ ಬಡಿದಿದೆಯೆಂದರೆ, ದಲಿತರಿಗೆ ಮಾತ್ರ ಬಡಿದಿದೆ ಎಂದು ತಿಳಿಯುವುದು ಮೂರ್ಖತನ. ಆದರೆ ನಮ್ಮನ್ನು ನಾವು ನೋಡಿಕೊಂಡಿದ್ದು ಈ ವರ್ಗೀಕರಣದ ಮೂಲಕವೇ.

ಆದ್ದರಿಂದ ಇದು ಬಹು ಮುಖ್ಯವಾಗಿ ಸಮಗ್ರತೆಯ ಪ್ರಶ್ನೆ. ಸಮಗ್ರವಾಗಿ ನೋಡಲು ಸಾಧ್ಯವಾದರೆ ಮಾತ್ರ ಈ ರೋಗವನ್ನು ಸರಿಪಡಿಸುವ ದಾರಿಯಲ್ಲಿ ಕ್ರಮಿಸಲು ಸಾಧ್ಯ ಇದುವರೆಗೆ ಅದನ್ನು ಮಾಡಿದ್ದೇವೆಯೆ? ಎಂದರೆ ಖಂಡಿತ ಇಲ್ಲ. ಚಳವಳಿಗಳ ದೃಷ್ಟಿಯಿಂದ ಅನೇಕ ಸಂದರ್ಭದಲ್ಲಿ ಕೆಲವರು ಹಿಂದೆ ಉಳಿದಿದ್ದು ದಾಖಲಾಗಿಲ್ಲ. ಇನ್ನು ಈ ಪರಿಸ್ಥಿತಿ ಬದಲಾಗಬೇಕು.

# ಈ ಮೂವತ್ತು ವರ್ಷ

1976ರಲ್ಲಿ ತುರ್ತುಪರಿಸ್ಥಿತಿಯ ಕಾಲ ಸಾಂಸ್ಕೃತಿಕ ಚಳವಳಿಯನ್ನು ಬಯಸಿ ಸಮುದಾಯದ ಉದಯವಾಯಿತು. 'ಹುತ್ತವ ಬಡಿದರೆ' ಮೊದಲ ನಾಟಕ. ಸಂಸರು ದುಷ್ಟ ಸರ್ವಾಧಿಕಾರಿಗೆ ಬದಲು 'ರಣಧೀರ ಕಂಠೀರವ'ನನ್ನು ನಾಯಕ ಎಂದು ಪ್ರತಿಬಿಂಬಿಸಿದ್ದನ್ನು ಪ್ರಶ್ನಿಸಿ 'ದುಷ್ಟನ ಕೊಂದರೆ ಶಿಷ್ಟ ಬಂದಾನೆಂದು ನಂಬಿ ಕೆಟ್ಟವರುಂಟಯ್ಯ' ಎಂದು ಹಾಡಿದಾಗ ಇಂದಿರಾಗಾಂಧಿಯನ್ನು ಸೃಷ್ಟಿಸಿದವರಿಗೂ ಎಚ್ಚರಿಕೆ ಕೊಡುತ್ತಿತ್ತು. ಮುಂದೆ ತಾಯಿ, ಗೆಲಿಲಿಯೋ ಮುಂತಾಗಿ 30ಕ್ಕೂ ಹೆಚ್ಚು ರಂಗ ನಾಟಕಗಳು, ಹತ್ತಾರು ಬೀದಿ ನಾಟಕಗಳು ಜನ ಕೇಂದ್ರಿತ ರಾಜಕಾರಣವನ್ನು ರಂಗ–ಪೀಠಕ್ಕೆ ತಂದಿತು. ಆಧುನಿಕ ಸಂವೇದನೆಯ ಕಲಾಭಿವ್ಯಕ್ತಿಯನ್ನು ಜನಸಮುದಾಯದ ಸಂವಾದದ ಸಾಧನೆಯಾಗಿಸಿತು. ಹಾಡು, ನಾಟಕ ಮುಂತಾದವು ಕೇವಲ ಸಾಂಸ್ಕೃತಿಕ ಚಟುವಟಿಕೆಯಲ್ಲ, ಸಾಂಸ್ಕೃತಿಕ ಚಳವಳಿ ಎನ್ನಿಸಿಕೊಂಡವು. Activiy to Activism ಎನ್ನುವುದು ದೃಷ್ಟಿ, ಧೋರಣೆ, ದಾರಿಗಳಲ್ಲಿ ಮೌಲಿಕ ಬದಲಾವಣೆತಂದಿತು.

ಸಮುದಾಯ ಸಾಂಸ್ಕೃತಿಕ ಚಳವಳಿಯಾಗಿ ರಾಜ್ಯಾದ್ಯಂತ ಹರಡಿದ್ದು ಸಾಂಸ್ಕೃತಿಕ ಜಾಥಾಗಳ ಮೂಲಕ. 1976ರ ಅಕ್ಟೋಬರ್ 15ರಿಂದ ನವೆಂಬರ್ 15ರ ವರೆಗೆ 'ಹೊಸ ಮೌಲ್ಯಗಳತ್ತ ಸಾಂಸ್ಕೃತಿಕ ಜಾಥಾ' 1981ರ ಜನವರಿ 15ರಿಂದ [ರೈತ ಚಳವಳಿ ಕಾಲದಲ್ಲಿ] 'ರೈತನತ್ತ ಸಾಂಸ್ಕೃತಿಕ ಜಾಥಾ', 1986ರಲ್ಲಿ ಏಪ್ರಿಲ್ 18ರಿಂದ ಮೇ 3ರವರೆಗೆ 'ಭೀಕರ ಬರದೆದುರು ಸಮುದಾಯ ದಶಕದ ಜಾಥಾ' ಮತ್ತು ಅಣುಸಮರದ ವಿರುದ್ಧ 'ನೂರು ಅಡಿಗಳ ಬಣ್ಣದ ನಡೆ, ಅಣು ಸಮರಕ್ಕೆ ಜನತೆಯ ತಡೆ', ಮುಂದೆ 'ವಿವೇಕ' ಕೋಮು ಸೌಹಾರ್ದತಾ ಜಾಥಾ, 1989ರಲ್ಲಿ ಸಫ್ದರ್ ಹಶ್ಮಿ ನೆನಪಿನ ಬೀದಿನಾಟಕಗಳ 'ಸಮಗ್ರತಾ ಉತ್ಸವ', 2002ರಲ್ಲಿ 'ಶಾಂತಿ ಸೌಹಾರ್ದ ನೆಮ್ಮದಿಗೆ ಬೆಳ್ಳಿಹಬ್ಬದ ಜಾಥಾ' ಇವು ಕರ್ನಾಟಕದ ವಿವಿಧ ಭಾಗಗಳನ್ನು, ಜನ ಸಮುದಾಯಗಳನ್ನೂ ಒಳಗೊಂಡಿತು. ಹಾಗೆಯೇ ಮುಂಬಯಿ ಇಪ್ಟಾ, ಲಕ್ನೋ ಇಪ್ಟಾ, ಆಂಧ್ರದ ಪ್ರಜಾನಾಟ್ಯ ಮಂಡಳಿ, ದೆಹಲಿಯ ಜನನಾಟ್ಯ ಮಂಡಳಿ, ಮುಂತಾದ ದೇಶದ ನಾನಾ ಭಾಗಗಳ ಪ್ರಗತಿಪರ ಸಾಂಸ್ಕೃತಿಕ ತಂಡಗಳ ಸಂಪರ್ಕ, ಸಾಹಚರ್ಯವನ್ನೂ ಸಾಧಿಸಿತು.

ಬೆಂಗಳೂರಿನಲ್ಲಿ ಆರಂಭವಾದರೂ ಬೇಗನೆ ರಾಜ್ಯವ್ಯಾಪೀ ಸಂಘಟನೆಯಾದದ್ದು ವಿಶೇಷ ಸಂಗತಿ. ಜಾಥಾಗಳು ಉತ್ಸವಗಳು ಇದಕ್ಕೆ ಪ್ರೇರಕವಾದಂತೆ, ಆ ಜಾಥಾಗಳು ಯಶಸ್ವಿಯಾಗಲೂ ಅವು ಕಾರಣ. ಕಾಲೇಜು ಪ್ರೊಫೆಸರ್‌ಗಳು, ಪಟ್ಟಣದ ನೌಕರರು, ಕಾರ್ಖಾನೆ ಮತ್ತು ಕೃಷಿ ಕಾರ್ಮಿಕರಾದಿಯಾಗಿ ಸಮಸ್ತ ಜನಸಮುದಾಯಗಳು 'ಸಮುದಾಯ' ದಲ್ಲಿರುವುದು, ಸತತವಾಗಿ ಯುವಕರು ಇದರಲ್ಲಿ ಸೇರುತ್ತಿರುವುದು ಹೆಮ್ಮೆಯ ವಿಷಯ. ಈಗ ನಮ್ಮ ಘಟಕಗಳು : ಬೆಂಗಳೂರು, ಬೆಂಗಳೂರು ಗ್ರಾಮಾಂತರ, ಕೆ.ಜಿ.ಎಫ್, ಕೋಲಾರ ಮತ್ತು ಬಾಗೇಪಲ್ಲಿ, ಮೈಸೂರು, ಕೊಡಗು, ಮಂಗಳೂರು, ಕುಂದಾಪುರ, ಬೆಳ್ತಂಗಡಿ, ಶಿವಮೊಗ್ಗ, ಗುಲ್ಬರ್ಗಾ, ಕೊಪ್ಪಳ, ಹರಿಹರ ಮತ್ತು ದಾವಣಗೆರೆ, ಬಳ್ಳಾರಿ, ರಾಯಚೂರು, ಧಾರವಾಡ ಮತ್ತು ರಾಮದುರ್ಗ, ಸಿಂಧನೂರು, ಬೀದರ್, ಹಾವೇರಿ ಮತ್ತು ತುಮಕೂರುಗಳಲ್ಲಿವೆ. ಇವುಗಳನ್ನು ಬೆಸಯಲು ಸಮುದಾಯ ಸಮನ್ವಯ ಸಮಿತಿ ಇದೆ.

ಹಲವು ಹೊತ್ತಿಗೆ, ಸಂಚಿಕೆಗಳನ್ನು ಹೊರತಂದ ಸಮುದಾಯ ಕೆಲವು ವರ್ಷ 'ಸಮುದಾಯ ವಾರ್ತಾಪತ್ರ'ವನ್ನು ತಂದಿತು. ಇದೀಗ ಅದು ಪುನರಾರಂಭ ಗೊಂಡಿದೆ. ಅಸಮಾನತೆಯ ವಿವಿಧ ಆಸುರೀ ಮುಖಗಳನ್ನು ಕುರಿತು ಪುಸ್ತಿಕೆ ಗಳನ್ನು ತರುವ ಯೋಜನೆ ಇದೆ. ಅದರ ಮೊದಲ ಕಂತು ಅಸ್ಪೃಶ್ಯತೆ ಕುರಿತಾದದ್ದು. ಚಿಂತಕರು, ಅನುಭವಿಗಳು, ಉತ್ಸುಕರು, ಉತ್ಸಾಹಿಗಳು ಈ ವೈಚಾರಿಕ ನಡೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಪ್ರೀತಿ ವಿಶ್ವಾಸಗಳಿಂದ ಆಹ್ವಾನಿಸುತ್ತೇವೆ.

---

ರೂ. 5